# ಅಧ್ಯಾತ್ಮರಾಮಾಯಣ

## (ಅರಣ್ಯಕಾಂಡ)



ಸಂಪಾದಕ

ಸಿ. ವೆಂಕಟರಮಣಶಾಸ್ತ್ರಿ,

ಚಾಮರಾಜನಗರ.



ಶ್ರೀರಾಮ ಪ್ರೆಸ್, ನಂಜನಗೂಡು.

1929

ಬೆಲೆ 12 ಆಣೆ.

## ಸಂಪಾದಕನ ಕೆಲವು ಮಾತುಗಳು.

ಈ ಅಧ್ಯಾತ್ಮರಾಮಾಯಣವನ್ನು ಸತಾತ್ಪರ್ಯವಾಗಿ ಪ್ರಕಟಿಸಬೇಕೆಂದು ಸೂಚಿಸಿದವರು ನಮ್ಮ ಪ್ರಿಯಮಿತ್ರರಾಗಿದ್ದ ಭುವನೇಶ್ವರೀ ಮುದ್ರಣಶಾಲಾಧ್ಯಕ್ಷರೂ, ಭಾರತೀವಿಲಾಸ ಸಂಪಾದಕರೂ ಆದ ಕೃಷ್ಣ ದೀಕ್ಷಿತರು ಕಾಲಗತಿಯೊದಗಲು ದೀಕ್ಷಿತರು ಕಾಲಪುರುಷನ ಕರಾಳಪಾಶದಿಂದೊಯ್ಯಲ್ಪಟ್ಟರು. ಈ ವೃತ್ತಾಂತವು ನಡೆದು ಹದಿನಾಲ್ಕು ವರ್ಷಗಳು ಗತಿಸಿಹೋದುವು. ರಾಮನು ಪಟ್ಟಾಭಿಷಿಕ್ತನಾಗಬೇಕಾದರೆ ಹದಿನಾಲ್ಕು ವರ್ಷಗಳನ್ನು ಅರಣ್ಯವಾಸದಿಂದ ಆದೆಂತು ಕಳೆಯಲ್ಪಡಬೇಕಾಗಿದ್ದಿತೋ ಅಂತೆಯೇ ಈ ಪುಸ್ತಕವೂ ಆರಂಭವಾಗಿ ರಾಮಾಭಿಷೇಕದಲ್ಲಿ ವಿಘ್ನವೊದಗಿದಂತೆ ವಿವಿಧ ವಿಘ್ನತರಂಗಗಳಿಗೆ ಗುರಿಯಾಗಿ ಹದಿನಾಲ್ಕುವರ್ಷ ಕಳೆದಮೇಲೆ ಈಗ ಕರ್ಣಾಟಕ ಲೋಕದಲ್ಲಿ ಪ್ರಕಾಶವಾಗಿದೆ. ಇನ್ನು ಮುಂದೆ ಇದು ಶ್ರೀರಾಮಾನುಗ್ರಹದಿಂದ ನಿರ್ವಿಘ್ನವಾಗಿ ನೆರವೇರಿ ಗ್ರಂಥ ಪೂರ್ತಿಯಾಗಬೇಕೆಂದು ಶ್ರೀರಾಮನನ್ನೇ ಪ್ರಾರ್ಥಿಸುತ್ತಾ ಕರ್ತವ್ಯಕರ್ಮದಲ್ಲಿ ಕೈಯಿಡುವೆವು.

ಪ್ರಮಾದವಶದಿಂದ ಅಚ್ಚಿನ ತಪ್ಪುಗಳು ವಿಶೇಷವಾಗಿ ಬಿದ್ದುಹೋಗಿರುವುದನ್ನು ಗ್ರಂಥ ಪೂರ್ತಿಯಾದಮೇಲೆ ಶೋಧನಪತ್ರದಲ್ಲಿ ಪ್ರಕಟಿಸುವೆವು.

ವಾಚಕರು ಇಂತಹ ನವರಸಭರಿತವಾದ ಮತ್ತು ತತ್ವಜ್ಞಾನಬೋಧಕವಾದ ಪವಿತ್ರ ಗ್ರಂಥವನ್ನು ಸಂಗ್ರಹಿಸಲು ಅಜಾಗರೂಕರಾಗಿರಬಾರದೆಂದು ಸೂಚಿಸುತ್ತೇನೆ.

ಚಾಮರಾಜನಗರ.
ಶುಕ್ಲ ಸಂ॥ ಭಾದ್ರಪದ ಬ॥ ೧೧
ಭಾನುವಾರ.
29—9—29

ರಾಮಸೇವಾಸಕ್ತ
ಚಿ. ವೆಂಕಟರಮಣಶಾಸ್ತ್ರಿ,
ಸಂಪಾದಕ
ಕಾದಂಬರೀ ಸಂಗ್ರಹ.

G. Sevapillai 23·12/31



|| ಶುಭಮಸ್ತು ||

|| ಶ್ರೀರಾಮಚಂದ್ರ ಪರಬ್ರಹ್ಮಣೇನಮಃ ||

# ಅರಣ್ಯಕಾಂಡ.

ಶ್ರೀ ಮಹಾದೇವಃ ||

ಅಥ ತತ್ರ ದಿನಂ ಸ್ಥಿತ್ವಾ ಪ್ರಭಾತೆ ರಘುನಂದನಃ |
ಸ್ನಾತ್ವಾ ಮುನಿಂ ಸಮಾಮಂತ್ರ್ಯ ಪ್ರಯಾಣಾಯೋಪಚಕ್ರಮೆ ||೧||

ಮುನೆ ಗಚ್ಛಾಮಹೆ ಸರ್ವೆ ಮುನಿಮಂಡಲಮಂಡಿತಂ |
ವಿಪಿನಂ ದಂಡಕಂ ಯತ್ರ ತ್ವಮಾಜ್ಞಾತುಮಿಹಾರ್ಹಸಿ ||೨||

ಮಾರ್ಗಪ್ರದರ್ಶನಾರ್ಥಾಯ ಶಿಷ್ಯಾನಾಜ್ಞಪ್ತುಮರ್ಹಸಿ |
ಶ್ರುತ್ವಾ ರಾಮಸ್ಯ ವಚನಂ ಪ್ರಹಸ್ಯಾತ್ರಿರ್ಮಹಾಯಶಾಃ ||೩||

---

ಮಹಾದೇವನು ಪಾರ್ವತಿಯನ್ನು ಕುರಿತು ಹೇಳುವನು ||

ಆ ಅತ್ರಿಮುನಿಯ ಆಶ್ರಮದಲ್ಲಿ ಒಂದುದಿನವಿದ್ದು ಬಳಿಕ ಬೆಳಿಗ್ಯೆ ರಘುನಂದನನು ಸ್ನಾನವನ್ನು ಮಾಡಿ ಮುನಿಯನ್ನು ಕೇಳಿ ಪ್ರಯಾಣಕ್ಕೋಸ್ಕರ ಉಪಕ್ರಮಿಸಿದನು ||೧||

ಎಲೈ ಮಹಾಮುನಿಯೇ! ಎಲ್ಲಿ ಮುನಿಸಮೂಹಗಳಿಂದ ಅಲಂಕೃತವಾದ ದಂಡಕವೆಂಬ ವನವೆಲ್ಲಿರುವುದೋ ಅಲ್ಲಿಗೆ ನಾವೆಲ್ಲರೂ ಹೋಗುವೆವು. ನೀನು ಅನುಜ್ಞೆಯನ್ನು ಕೊಡುವನಾಗು ||೨||

ಮಾರ್ಗವನ್ನು ತೋರಿಸಲೋಸುಗ ಶಿಷ್ಯರಿಗೆ ಆಜ್ಞಾಪಿಸುವನಾಗು. ಎಂದು ಹೇಳಿದ ರಾಮನ ಮಾತನ್ನು ಕೇಳಿ ಮಹಾ ಯಶಸ್ವಿಯಾದ ಅತ್ರಿಮುನಿಯು ನಕ್ಕು ಈರೀತಿಯಾಗಿ ಹೇಳಿದನು ||೩||

ಸರ್ವಸ್ಯ ಮಾರ್ಗದರ್ಶೀ ತ್ವಂ ತವ ಕೋ ಮಾರ್ಗದರ್ಶಕಃ |
ತಥಾಪಿ ದರ್ಶಯಿಷ್ಯಂತಿ ತವಲೋಕಾನುಸಾರಿಣಃ ||೪||
ಇತಿ ಶಿಷ್ಯಾನ್ ಸಮಾದಿಶ್ಯ ಸ್ವಯಂ ಕಿಂಚಿತ್ಸಮನ್ವಗಾತ್ |
ರಾಮೇಣ ವಾರಿತಃ ಪ್ರೀತ್ಯಾಹ್ಯತ್ರಿಸ್ಸ್ವಭವನಂ ಯಯೌ ||೫||
ಕ್ರೋಶಮಾತ್ರಂ ತತೋ ಗತ್ವಾ ದದರ್ಶ ಮಹತೀಂ ನದೀಂ |
ಅತ್ರೇಶ್ಶಿಷ್ಯಾನುವಾಚೇದಂ ರಾಮೋ ರಾಜೀವಲೋಚನಃ |
ನದ್ಯಾಸ್ಸಂತರಣೇ ಕಶ್ಚಿದುಪಾಯೋ ವಿದ್ಯತೇ ನ ವಾ ||೬||
ಊಚುಸ್ತೇ ವಿದ್ಯತೇ ನೌಕಾ ಸುದೃಢಾ ರಘುನಂದನ |
ತಾರಯಿಷ್ಯಾಮಹೇ ಯುಷ್ಮಾನ್ಸ್ವಯಮೇವ ಕ್ಷಣಾದಿಹ ||೭||
ತತೋ ನಾವಂ ಸಮಾರೋಪ್ಯ ಸೀತಾಂ ರಾಘವಲಕ್ಷ್ಮಣೌ |
ಕ್ಷಣಾತ್ಸಂತಾರಯಾಮಾಸುರ್ನದೀಂ ಮುನಿಕುಮಾರಕಾಃ |
ರಾಮಾಭಿನಂದಿತಾಸ್ಸರ್ವೇ ಜಗ್ಮುರತ್ರೇ ರಥಾಶ್ರಮಂ ||೮||

---

ಎಲೈ ಶ್ರೀರಾಮನೇ! ನೀನು ಸರ್ವಲೋಕಕ್ಕೂ ಮಾರ್ಗವನ್ನು ತೋರಿಸುವವನು, ನಿನಗೆ ಮಾರ್ಗವನ್ನು ತೋರಿಸುವನಾವನು! ಆದಾಗ್ಯೂ ಲೋಕಾನುಸಾರಿಯಾದ ನಿನಗೆ ಇವರು ಮಾರ್ಗವನ್ನು ತೋರಿಸುವರು ||೪||

ಎಂದು ಹೇಳಿ ಮಾರ್ಗವನ್ನು ತೋರಿಸುವಂತೆ ಶಿಷ್ಯರಿಗಾಜ್ಞಾಪಿಸಿ ತಾನೂ ಸ್ವಲ್ಪದೂರ ಶ್ರೀರಾಮನನ್ನು ಅನುಸರಿಸಿ ಹೊರಟನು. ಪ್ರೀತಿಯಿಂದ ಶ್ರೀರಾಮನಿಂದ ತಡೆಯಲ್ಪಟ್ಟ ಅತ್ರಿಮುನಿಯು ತನ್ನ ಮನೆಯನ್ನು ಕುರಿತು ಹೊರಟನು ||೫||

ನಳಿನದಳಾಕ್ಷನಾದ ರಾಮನು ಅಲ್ಲಿಂದ ಕ್ರೋಶಮಾತ್ರ ಹೋಗಿ ಮಹತ್ತಾದ ನದಿಯನ್ನು ಕಂಡನು. ಅತ್ರಿಯ ಶಿಷ್ಯರನ್ನು ಕುರಿತು ನದಿಯನ್ನು ದಾಟಲು ಉಪಾಯವು ಯಾವುದಾದರೂ ಇರುವುದೋ? ಇಲ್ಲವೊ? ಎಂದು ಕೇಳಿದನು ||೬||

ಎಲೈ ರಘುನಾಥನೇ! ದೃಢವಾದ ನಾವೆಯು ಇರುವುದು. ನಾವೆಯಿಂದ ನಿಮ್ಮನ್ನು ಕ್ಷಣಮಾತ್ರದಲ್ಲಿ ನದಿಯನ್ನು ದಾಟಿಸುವೆವೆಂದು ಶಿಷ್ಯರು ಹೇಳಿದರು ||೭||

ಬಳಿಕ ಮುನಿಕುಮಾರರು ಸೀತೆಯನ್ನೂ, ರಾಮಲಕ್ಷ್ಮಣರನ್ನೂ ನಾವೆಯನ್ನು ಹತ್ತಿಸಿ ಕ್ಷಣಮಾತ್ರದಲ್ಲಿ ನದಿಯನ್ನು ದಾಟಿಸಿದರು. ಬಳಿಕ ಶ್ರೀರಾಮನಿಂದ ಅನುಮೋದಿಸಲ್ಪಟ್ಟ ಮುನಿಕುಮಾರರೆಲ್ಲರೂ ಅತ್ರಿಮುನಿಯ ಆಶ್ರಮವನ್ನು ಸೇರಿದರು||

ತಾವೇತ್ಯ ವಿಪಿನಂ ಘೋರಂ ಝಿಲ್ಲೀ ಝುಂಕಾರನಾದಿತಂ |
ನಾನಾಮೃಗಗಣಾಕೀರ್ಣಂ ಸಿಂಹವ್ಯಾಘ್ರಾದಿ ಭೀಷಣಂ ||೯||

ರಾಕ್ಷಸೈರ್ಘೋರರೂಪೈಶ್ಚ ಸೇವಿತಂ ರೋಮಹರ್ಷಣಂ |
ಪ್ರವಿಶ್ಯ ವಿಪಿನಂ ಘೋರಂ ರಾಮೋ ಲಕ್ಷ್ಮಣಮಬ್ರವೀತ್ ||೧೦||

ಇತಃ ಪರಂ ಪ್ರಯತ್ನೇನ ಗಂತವ್ಯಂ ಸಹಿತೇನ ಮೇ |
ಧನುರ್ಗುಣೇನ ಸಂಯೋಜ್ಯ ಶರಾನಪಿ ಕರೆ ದಧತ್ |
ಅಗ್ರೇ ಯಾಸ್ಯಾಮ್ಯಹಂ ಪಶ್ಚಾತ್ತ್ವಮನ್ವೇಹಿ ಧನುರ್ಧರಃ ||೧೧||

ಆವಯೋರ್ಮಧ್ಯಗಾ ಸೀತಾ ಮಾಯೇವಾತ್ಮಪರಾತ್ಮನೋಃ |
ಚಕ್ಷುಶ್ಚಾರಯ ಸರ್ವತ್ರ ದ್ರಷ್ಟುಂ ರಕ್ಷೋಭಯಂ ಮಹತ್ |
ವಿದ್ಯತೆ ದಂಡಕಾರಣ್ಯೆ ಶ್ರುತಪೂರ್ವಮರಿಂದಮ ||೧೨||

---

ಅತಿಶಯವಾದ ಕಾಡುಗಳುಳ್ಳದ್ದಾಗಿ ಭಯಂಕರವಾದ ಭ್ರಮರವಿಶೇಷಗಳ ಝೇಂಕಾರದಿಂದ ಶಬ್ದಾಯಮಾನವಾಗಿ, ನಾನಾವಿಧ ಮೃಗಸಮೂಹಗಳಿಂದ ವ್ಯಾಪ್ತವಾಗಿ ಸಿಂಹ ವ್ಯಾಘ್ರ ಮೊದಲಾದುವುಗಳಿಂದ ಭಯಂಕರವಾಗಿ ||೯||

ಘೋರವಾದ ರೂಪವುಳ್ಳ ರಾಕ್ಷಸರಿಂದ ಕೂಡಿರುವುದಾದಕಾರಣ ರೋಮಾಂಚವನ್ನುಂಟುಮಾಡುವ ಈ ಭೀಕರವಾದ ಅರಣ್ಯವನ್ನು ಪ್ರವೇಶಿಸಿ ರಾಮನು ಲಕ್ಷ್ಮಣನನ್ನು ಕುರಿತು ಹೇಳಿದನು ||೧೦||

ಎಲೈ ಲಕ್ಷ್ಮಣನೇ! ಇಲ್ಲಿಂದ ಮುಂದಕ್ಕೆ ಪ್ರಯತ್ನದಿಂದ ನಿಮ್ಮಿಬ್ಬರಿಂದ ಕೂಡಿರುವ ನನ್ನಿಂದ ಹೋಗತಕ್ಕದಾಗಿರುವುದು. ಅದಕಾರಣ ಅಲ್ಲಿಕೆಯಿಂದ ಧನುವನ್ನು ಸೇರಿಸಿ ಶರಗಳನ್ನು ಕೈಲಿ ಧರಿಸಿದವನಾಗಿ ನಾನು ಮುಂದುಗಡೆ ಹೋಗುವೆನು. ನೀನೂ ಧನುರ್ಧಾರಿಯಾಗಿ ಹಿಂದುಗಡೆ ಅನುಸರಿಸಿ ಬರುವವನಾಗು ||೧೧||

ಜೀವಪರಮಾತ್ಮರ ಮಧ್ಯದಲ್ಲಿ ಮಾಯೆಯಂತೆ ನಮ್ಮಿಬ್ಬರ ಮಧ್ಯದಲ್ಲಿ ಜಾನಕಿಯು ಇರಲಿ. ರಾಕ್ಷಸನನ್ನು ನೋಡುವುದಕ್ಕಾಗಿ ದೃಷ್ಟಿಯನ್ನು ಎಲ್ಲಾ ಕಡೆಯಲ್ಲೂ ಪ್ರಚಾರಪಡಿಸುತ್ತಿರು. ಎಲೈ ಶತ್ರುಘಾತಿಯೇ, ದಂಡಕಾರಣ್ಯದಲ್ಲಿ ಭಯವು ಮಹತ್ತಾಗಿರುವುದೆಂದು ಪೂರ್ವದಲ್ಲಿ ಕೇಳಿದ್ದೆನು ||೧೨||

ಇತ್ಯೇವಂ ಭಾಷಮಾಣೌ ತೌ ಜಗ್ಮತುಸ್ಸಾರ್ಧಯೋಜನಂ |
ತತ್ರೈ ಕಾ ಪುಷ್ಕರಿಣ್ಯಾಸ್ತೆ ಕಲ್ಹಾರಕುಮುದೋತ್ಪಲೈಃ |
ಅಂಬುಜೈಃ ಶ್ರೀತತೋ ಯೇನ ಶೋಭಮಾನಾ ವ್ಯದೃಶ್ಯತ ||೧೩||

ತತ್ಸಮೀಪಮಥೋ ಗತ್ವಾ ಪೀತ್ವಾ ತತ್ಸಲಿಲಂ ಶುಭಂ |
ಊಷುಸ್ತೇ ಸಲಿಲಾಭ್ಯಾಶೆ ಕ್ಷಣಂ ಛಾಯಾಮುಪಾಶ್ರಿತಾಃ ||೧೪||

ತತೊ ದದೃಶುರಾಯಾಂತಂ ಮಹಾಸತ್ವಂ ಭಯಾನಕಂ |
ಕರಾಲದಂಷ್ಟ್ರವದನಂ ಭೀಷಯಂತಂ ಸ್ವಗರ್ಜಿತೈಃ ||೧೫||

ವಾಮಾಂಸೆ ನ್ಯಸ್ತಶೂಲಾಗ್ರಗ್ರಥಿತಾನೇಕಮಾನುಷಂ |
ಭಕ್ಷಯಂತಂ ಗಜವ್ಯಾಘ್ರಮಹಿಷಂ ವನಗೋಚರಂ |
ಜ್ಯಾರೋಪಿತಂ ಧನುರ್ಧೃತ್ವಾ ರಾಮೊ ಲಕ್ಷ್ಮಣಮಬ್ರವೀತ್ ||೧೬||

ಪಶ್ಯ ಭ್ರಾತರ್ಮಹಾಕಾಯೊ ರಾಕ್ಷಸೋಯಮುಪಾಗತಃ |
ಆಯಾತ್ಯಭಿಮುಖಂ ನೋಗ್ರೋ ಭೀರೂಣಾಂ ಭಯಮಾವಹನ್ ||೧೭||

---

ಎಂದು ಈ ರೀತಿಯಾಗಿ ಅವರು ಮಾತನಾಡುತ್ತಾ ಒಂದೂವರೆ ಯೋಜನ ನಡೆದರು. ಅಲ್ಲಿ ಕಲ್ಹಾಹ ಬಿಳಿ ನೈದಿಲೆ, ಕನ್ನೈದಿಲೆಗಳಿಂದಲೂ ಪಕ್ಷಿಗಳಿಂದಲೂ ತಂಪಾದ ನೀರಿನಿಂದಲೂ, ಪ್ರಕಾಶಿಸುವ ಶರಸ್ಸು ಇದ್ದದ್ದು ಅದು ಈಗಲೂ ಕಾಣ ಬರುವುದು ||೧೩||

ಅದರ ಸಮೀಪಕ್ಕೆ ಹೋಗಿ ಬಳಿಕ ಶುಭವಾದ ಅದರ ಉದಕವನ್ನು ಕುಡಿದು ಅದರ ಸಮೀಪದಲ್ಲಿಯೇ ಇವರು ಮರದ ನರಳನ್ನಾಶ್ರಯಿಸಿ ಕ್ಷಣಕಾಲವಿದ್ದರು ||

ಬಳಿಕ ಅಲ್ಲಿಗೆ ಮಹತ್ತಾದ ಬಲವುಳ್ಳವನಾಗಿ ಭಯಂಕರನಾಗಿಯೂ, ಕ್ರೂರ ವಾದ ಕೋರೆದಾಡೆಯ ಮುಖವುಳ್ಳವನಾಗಿಯೂ, ತನ್ನ ಘರ್ಜನೆಯಿಂದ ಭಯ ಪಡಿಸುವವನಾಗಿಯೂ ||೧೫||

ಎಡದ ಹೆಗಲಿನಲ್ಲಿ ಇರಿಸಲ್ಪಟ್ಟ ಶೂಲದ ಕೊನೆಯಲ್ಲಿ ಕಟ್ಟಲ್ಪಟ್ಟ ಅನೇಕ ಮನುಷ್ಯರ ಹೆಣಗಳುಳ್ಳವನಾಗಿಯೂ, ಆನೆ, ಹುಲಿ, ಕೋಣಗಳನ್ನೂ, ಇನ್ನೂ ಕಾಡಿನಲ್ಲಿ ಕಂಡ ಪ್ರಾಣಿಗಳೆಲ್ಲವನ್ನೂ ತಿನ್ನುತ್ತಾ ಬರುತ್ತಿರುವ ರಾಕ್ಷಸನನ್ನು ಕಂಡರು. ಆಗ ಸೇರಿಸಲ್ಪಟ್ಟ ಶಿಂಜನಿಯುಳ್ಳ ಧನುವನ್ನು ಹಿಡಿದು ರಾಮನು ಲಕ್ಷ್ಮಣನಿಗೆ ಹೇಳಿದನು ||೧೬||

ಎಲೈ ತಮ್ಮನೇ ಮಹತ್ತಾದ ಶರೀರವುಳ್ಳ ಈ ರಾಕ್ಷಸನು ಬಂದನು.

ಸಜ್ಜೀಕೃತಧನುಸ್ತಿಷ್ಠ ಮಾಭೈರ್ಜನಕನಂದಿನಿ |
ಇತ್ಯುಕ್ತ್ವಾ ಬಾಣಮಾದಾಯ ಸ್ಥಿತೋ ರಾಮಃ ಇವಾಚಲಃ ||೧೮||

ಸತು ದೃಷ್ಟ್ವೈವ ರಘುನಾಥಂ ಜಾನಕೀಂ ಲಕ್ಷ್ಮಣಂ ತಥಾ |
ಅಟ್ಟಹಾಸಂ ತತಃ ಕೃತ್ವಾ ಭೀಷಯನ್ನಿದಮಬ್ರವೀತ್ ||೧೯||

ಕೌಯುವಾಂ ಚಾಪಿ ತೂಣೀರ ಜಟಾವಲ್ಕಲಧಾರಿಣೌ |
ಮುನಿವೇಷಧರೌ ಬಾಲೌ ಸ್ತ್ರೀಸಹಾಯೌ ಸುದುರ್ಮದೌ ||೨೦||

ಸುಂದರೌಬತಮೇ ವಕ್ತ್ರ ಪ್ರವಿಷ್ಟ ಕಬಳೋಪಮೌ |
ಕಿಮರ್ಥ ಮಾಗತೌ ಘೋರಂ ವನಂ ವ್ಯಾಳನಿಷೇವಿತಂ ||೨೧||

ಶ್ರುತ್ವಾ ರಕ್ಷೋ ವಚೋ ರಾಮಃ ಸ್ಮಯಮಾನ ಉವಾಚತಂ |
ಅಹಂ ರಾಮಸ್ತ್ವಯಂ ಭ್ರಾತಾ ಲಕ್ಷ್ಮಣೋ ಮಮ ಸಂಮತಃ ||೨೨||

ಏಷಾ ಸೀತಾಮಮ ಪ್ರಾಣವಲ್ಲಭಾ ವಯ ಮಾಗತಾಃ |
ಪಿತೃವಾಕ್ಯಂ ಪುರಸ್ಕೃತ್ಯ ಶಿಕ್ಷಣಾರ್ಥಂ ಭವಾದೃಶಾಂ ||೨೩||

---

ನೀನು ಧನುವನ್ನು ಸಿದ್ಧಮಾಡಿಕೊಂಡಿರುವನಾಗು, ಎಲೌ ಜಾನಕಿಯೇ ನೀನು ಭಯಪಡಬೇಡವೆಂದು ರಾಮನು ಹೇಳಿ ಬಾಣವನ್ನು ಗ್ರಹಿಸಿ ಗಿರಿಯಂತೆ ಸ್ಥಿರನಾಗಿ ನಿಂತನು ||೧೮||

ಆ ರಾಕ್ಷಸನು ರಾಮನನ್ನೂ, ಸೀತೆಯನ್ನೂ, ಹಾಗೆಯೇ ಲಕ್ಷ್ಮಣನನ್ನೂ ನೋಡಿ ಬಳಿಕ ಅಟ್ಟಹಾಸವನ್ನು ಮಾಡಿ ಬೆದರಿಸುತ್ತ ಈ ಮಾತನ್ನು ಹೇಳಿದನು||

ಬಾಣ, ಬತ್ತಳಿಕೆ, ಜಡೆ ನಾರುಬಟ್ಟೆಗಳನ್ನು ಧರಿಸುತ್ತಾ ಮುನಿವೇಷಧಾರಿಗಳಾಗಿ ಬಾಲರಾಗಿಯೂ, ಸ್ತ್ರೀಸಹಾಯರಾಗಿಯೂ ಅತ್ಯಂತ ದುಷ್ಟವಾದ ಮದವುಳ್ಳವರಾಗಿರುವ ನೀವು ಯಾರು ? ||೨೦||

ನೀವು ಸುಂದರರಾಗಿರುವಿರಲ್ಲವೇ ? ನನ್ನ ಬಾಯಿಗೆ ತುತ್ತಾಗಿರುವಿರಿ. ಮೃಗ್ಯಾದಿಯನ್ನು ಏರಿದ ಆನೆಗಳಿಂದ ಕೂಡಿರುವ ಈ ವನಕ್ಕೆ ಏಕೆ ಬಂದಿರಿ ||೨೧||

ಎಂದು ಹೇಳಿದ ರಾಕ್ಷಸನಮಾತನ್ನು ಕೇಳಿ ರಾಮನು ನಸುನಗುತ ಅವನಿಗೆ ಹೇಳಿದನು — ಎಲಾ ರಾಕ್ಷಸನೇ ನಾನು ರಾಮನು, ಇವನು ನನಗೆ ಸಮ್ಮತನಾದ ತಮ್ಮನಾದ ಲಕ್ಷ್ಮಣನು ||೨೨||

ಇವಳು ನನಗೆ ಪ್ರಾಣಕಾಂತೆಯಾದ ಸೀತೆಯು, ನಾವು ತಂದೆಯ ವಾಕ್ಯ

ಶ್ರುತ್ವಾ ತದ್ರಾಮವಚನ ಮಟ್ಟಹಾಸ ಮ್ಮಥಾಕರ್ಣೋತ್ |
ವ್ಯಾದಾಯವಕ್ತ್ರಂ ಬಾಹುಭ್ಯಾಂ ಸಾಲಮಾದಾಯ ಸ್ತ್ವರಂ ||೨೪||

ಮಾಂ ನಜಾನಾಸಿ ರಾಮತ್ವಂ ವಿರಾಧಂ ಲೋಕವಿಶ್ರುತಂ |
ಮದ್ಭಯಾನ್ಮುನಯಸ್ಸರ್ವೇ ತ್ಯಕ್ತ್ವಾ ವನಮಿತೋ ಗತಾಃ ||೨೫||
ಯದಿ ಜೀವಿತು ಮಿಚ್ಛಾಚೇತ್ ತ್ಯಕ್ತ್ವಾ ಸೀತಾಂ ನಿರಾಯುಧಾಃ|
ಪಲಾಯತ ನಚೇಚ್ಛೀಘ್ರಂ ಭಕ್ಷಯಾಮಿ ಯುವಾಮಹಂ ||೨೬||

ಇತ್ಯುಕ್ತ್ವಾ ರಾಕ್ಷಸಸ್ಸೀತಾ ಮಾದಾತು ಮಭಿದುದ್ರುವೆ |
ರಾಮಶ್ಚಿಚ್ಛೇದ ತದ್ಬಾಹೂ ಶರೇಣ ಪ್ರಹಸನ್ನಿವ ||೨೭||

ತತಃ ಕ್ರೋಧಪರೀತಾತ್ಮಾ ವ್ಯಾದಾಯ ವಿಕಟಂ ಮುಖಂ |
ರಾಮಮಭ್ಯದ್ರವದ್ರಾಮಃ ಶ್ಚಿಚ್ಛೇದ ಪರಿಧಾವತಃ |
ಪದದ್ವಯಂ ವಿರಾಧಸ್ಯ ತದದ್ಭುತ ಮಿವಾ ಭವತ್ ||೨೮||

---

ವನ್ನು ಪುರಸ್ಕರಿಸಿ ನಿಮ್ಮಂಥವರನ್ನು ಶಿಕ್ಷಿಸಲೋಸುಗ ಬಂದಿರುವೆವು ||೨೩||

ಎಂದು ಹೇಳಿದ ರಾಮನಮಾತನ್ನು ಕೇಳಿ ತೋಳುಗಳಿಂದ ಒಂದು ವೃಕ್ಷವನ್ನು ಮುರಿದು ಜಾಗ್ರತೆಯಾಗಿ ತೆಗೆದುಕೊಂಡು ಬಾಯನ್ನು ತೆರೆದುಕೊಂಡು ಅಟ್ಟಹಾಸವನ್ನು ಮಾಡಿದನು ||೨೪||

ಎಲಾ ರಾಮನೇ, ವಿರಾಧನೆಂದು ಲೋಕಪ್ರಖ್ಯಾತನಾದ ನನ್ನನ್ನು ನೀನು ಅರಿಯೆ ? ನನ್ನ ಭಯದಿಂದ ಮುನಿಗಳೆಲ್ಲರೂ ವನವನ್ನು ಬಿಟ್ಟು ಇಲ್ಲಿಂದ ಹೊರಟು ಹೋದರು ||೨೫||

ನೀವು ಬದುಕಲು ಇಚ್ಛೆಯಿದ್ದರೆ ಸೀತೆಯನ್ನು ಬಿಟ್ಟು ಓಡಿಹೋಗಿರಿ. ಹಾಗೆ ಮಾಡದಿದ್ದರೆ ಜಾಗ್ರತೆಯಾಗಿ ನಿಮ್ಮಿಬ್ಬರನ್ನೂ ನಾನು ತಿಂದುಬಿಡುವೆನು ||೨೬||

ಎಂದು ಹೇಳಿ ಆ ರಾಕ್ಷಸನು ಸೀತೆಯನ್ನು ಗ್ರಹಿಸಲು ಓಡಿಬಂದನು. ರಾಮನು ನಗುತ್ತಾ ಬಾಣದಿಂದ ಅವನ ಎರಡು ತೋಳುಗಳನ್ನು ಕತ್ತರಿಸಿದನು ||

ಬಳಿಕ ಕೋಪದಿಂದ ಕೂಡಿದ ರಾಕ್ಷಸನು ವಕ್ರವಾದ ಬಾಯನ್ನು ತೆರೆದುಕೊಂಡು ರಾಮನನ್ನು ಅಟ್ಟಿಕೊಂಡು ಬಂದನು. ರಾಮನು ಓಡಿಬರುವ ವಿರಾಧನ ಎರಡು ಕಾಲುಗಳನ್ನೂ ಕತ್ತರಿಸಿದನು. ಅದು ತುಂಬಾ ಆಶ್ಚರ್ಯವಾಯಿತು. ||೨೮||

ತತಸ್ಸರ್ವಾಜವಾಸ್ಯೇನ ಗ್ರಸಿತುಂ ರಾಮಮಾಪತತ್ |
ರಾಮೋಽರ್ಧಚಂದ್ರಾಕಾರೇಣ ಬಾಣೇನಾಸ್ಯ ಮಹಚ್ಛಿರಃ |
ಚಿಚ್ಛೇದ ರುಧಿರೌಘೇಣ ಪಪಾತ ಧರಣೀತಲೇ ||೨೯||

ತತಸ್ಸೀತಾ ಸಮಾಲಿಂಗ್ಯ ಪ್ರಶಶಂಸ ರಘೂತ್ತಮಂ |
ತತೊ ದುಂದುಭಯೋನೇದುರ್ದಿವಿದೇವಗಣೇರಿತಾಃ |
ನನೃತುಶ್ಚಾಪ್ಸರೋ ಹೃಷ್ಟಾಃ ಜಗುರ್ಗಂಧರ್ವಕಿನ್ನರಾಃ ||೩೦||

ವಿರಾಧ ಕಾಯಾದತಿ ಸುಂದರಾಕೃತಿರ್ವಿಭ್ರಾಜಮಾನೊ ವಿಮಲಾಂಬ ರಾವೃತಃ|
ಪ್ರತಪ್ತಚಾಮೀಕರ ಚಾರು ಭೂಷಣೋ ವ್ಯದೃಶ್ಯತಾಗ್ರೇ ಗಗನೇ ರವಿರ್ಯಥಾ ||೩೧||

ಪ್ರಣಮ್ಯ ರಾಮಂ ಪ್ರಣತಾರ್ತಿಹಾರಿಣಂ ಭವಪ್ರವಾಹೊ ಪರಮಂ ಘೃಣಾಕರಂ |
ಪ್ರಣಮ್ಯ ಭೂಯಃ ಪ್ರಣನಾಮ ದಂಡವತ್ಪ್ರಪನ್ನ ಸರ್ವಾರ್ತಿಹರಂ ಪ್ರಸನ್ನಧೀಃ ||೩೨||

---

ಬಳಿಕ ಹೆಬ್ಬಾವಿನಂತೆ ರಾಮನನ್ನು ನುಂಗಲು ಬಂದನು. ರಾಮನು ಅರ್ಧ ಚಂದ್ರದಂತೆ ಅಲಗುಳ್ಳ ಬಾಣದಿಂದ ಈ ರಾಕ್ಷಸನ ಮಹತ್ತಾದ ಶಿರವನ್ನು ಕತ್ತರಿಸಿದನು. ಅದು ರಕ್ತಪ್ರವಾಹದೊಡನೆ ಭೂಮಿಯಲ್ಲಿ ಬಿದ್ದಿತು ||೨೯||

ಬಳಿಕ ಸೀತೆಯು ಶ್ರೀರಾಮನನ್ನಾಲಂಗಿಸಿ ಸ್ತುತಿಸಿದಳು. ಬಳಿಕ ಅಂತರಿಕ್ಷದಲ್ಲಿ ದೇವತೆಗಳಿಂದ ಬಾರಿಸಲ್ಪಟ್ಟ ದುಂದುಭಿಗಳು ಧ್ವನಿಮಾಡಿದುವು ಸಂತುಷ್ಟರಾದ ಅಪ್ಸರಸ್ತ್ರೀಯರು ನರ್ತನವನ್ನು ಮಾಡಿದರು. ಗಂಧರ್ವರೂ ಕಿನ್ನರರೂ ಸಹಾ ಹಾಡಿದರು ||೩೦||

ಆಗ ವಿರಾಧನ ಶರೀರದಿಂದ ಅತಿ ಸುಂದರವಾದ ಆಕಾರವುಳ್ಳ ನಿರ್ಮಲವಾದ ವಸ್ತ್ರವುಳ್ಳವನಾಗಿ ಪ್ರಕಾಶಿಸುತ್ತ ಪುಟಪಾಕ ಪರಿಶುದ್ಧವಾದ ಸ್ವರ್ಣದಿಂದ ಉಂಟಾಗಿರುವ ಮನೋಹರವಾದ ಒಡವೆಗಳಿಂದ ಕೂಡಿದ ಪುರುಷನು ಗಗನದಲ್ಲಿ ಸೂರ್ಯನಂತೆ ಎದ್ದುಬಂದು ಮುಂದುಗಡೆಯಲ್ಲಿ ಕಾಣಿಸಿಕೊಂಡನು ||೩೧||

ಆ ಪುರುಷನು ನಮಿಸಿದವರ ದುಃಖವನ್ನು ಪರಿಹರಿಸುವ ಸಂಸಾರಪ್ರವಾಹ

ಶ್ರೀರಾಮ ರಾಜೀವದಳಾಯತಾಕ್ಷ ವಿದ್ಯಾಧರೋಹಂ ವಿಪುಲಪ್ರಕಾಶಃ।
ದೂರ್ವಾಸಸಾ ಕಾರಣಕೋಪಮೂರ್ತಿನಾ ಶಪ್ತಃ ಪುರಾ ಸೋದ್ಯ ವಿಮೋ
ಚಿತ ಸ್ತ್ವಯಾ ॥೩೩॥

ಇತಃ ಪರಂ ತ್ವಚ್ಚರಣಾರವಿಂದಯೋಃ ಸ್ಮೃತಿಸ್ಸದಾಮೇಸ್ತು ಭವೋಪ
ಶಾಂತಯೆ ।
ತ್ವಂ ನಾಮಸಂಕೀರ್ತನಮೇವ ವಾಣೀ ಕರೋತುಮೆ ಕರ್ಣಪುಟಂ
ತ್ವದೀಯಂ ॥೩೪॥

ಕಥಾಮೃತಂ ಪಾತುಕ ರದ್ವಯಂತೆ ಪಾದಾರವಿಂದಾರ್ಚನಮೇವ
ಕುರ್ಯಾತ್ ।
ಶಿರಶ್ಚತೆ ಪಾದಯುಗಪ್ರಣಾಮಂ ಕರೋತು ನಿತ್ಯಂ ಭವದೀಯ ಮೇವ ॥

ನಮಸ್ತುಭ್ಯಂ ಭಗವತೆ ವಿಶುದ್ಧಜ್ಞಾನಮೂರ್ತಯೆ ।
ಆತ್ಮಾರಾಮಾಯ ರಾಮಾಯ ಸೀತಾರಾಮಾಯ ವೇಧಸೆ ॥೩೬॥

---

ರೂಪವಾದ ಮೋಹಕ್ಕೆ ನಾಶಕನಾಗಿ ದಯಾರಸಕ್ಕೆ ಆಶ್ರಯನಾದ ರಾಮನಿಗೆ ನಮಿಸಿ ಪುನಃ ನಮಿಸಿ ನಿರ್ಮಲವಾದ ಬುದ್ಧಿಯುಳ್ಳವನಾಗಿ ಶರಣಾಗತರ ದುಃಖವನ್ನು ಪರಿಹರಿಸುವ ಶ್ರೀರಾಮನಿಗೆ ದಂಡದಂತೆ ನಮಿಸಿದನು ॥೩೨॥

ಬಳಿಕ ಹೇಳಿದನು — ಪದ್ಮದಳದಂತೆ ದೀರ್ಘವಾದ ನೇತ್ರವುಳ್ಳ ಶ್ರೀರಾಮನೆ! ನಾನು ವಿಸ್ತಾರವಾದ ಕೀರ್ತಿಪ್ರಕಾಶವುಳ್ಳ ವಿದ್ಯಾಧರನು. ಅಕಾರಣವಾದ ಕೋಪವೇ ರೂಪವಾಗುಳ್ಳ ದೂರ್ವಾಸಮುನಿಯಿಂದ ಪೂರ್ವದಲ್ಲಿ ಶಪಿಸಲ್ಪಟ್ಟಿದ್ದೆನು. ಈಗ ನಿನ್ನಿಂದ ಶಾಪೋತ್ಪನ್ನವಾದ ರಾಕ್ಷಸಾಕಾರದಿಂದ ಬಿಡಿಸಲ್ಪಟ್ಟೆನು ॥೩೩॥

ಇನ್ನು ಮೇಲೆ ನನಗೆ ಸಂಸಾರ ದುಃಖಶಾಂತಿಗೋಸ್ಕರ ನಿನ್ನ ಪಾದಕಮಲದ ಸ್ಮರಣೆಯು ಸರ್ವದಾ ಉಂಟಾಗಲಿ ನನ್ನ ವಾಕ್ಕು ನಿನ್ನ ನಾಮಸಂಕೀರ್ತನವನ್ನೇ ಮಾಡಲಿ ನನ್ನ ಕಿವಿಯು ನಿನ್ನ ಸಂಬಂಧಿಯಾದ ॥೩೪॥

ಕಥೆಯೆಂಬ ಅಮೃತವನ್ನೇ ಕುಡಿಯಲಿ. ನನ್ನ ಎರಡು ಕೈಗಳು ನಿನ್ನ ಪಾದಪದ್ಮಗಳ ಪೂಜೆಯನ್ನೇ ಮಾಡಲಿ, ನನ್ನ ತಲೆಯು ನಿನ್ನ ಪಾದಗಳಿಗೆ ನಮಸ್ಕಾರವನ್ನೇ ಮಾಡಲಿ, ಹೀಗೆ ನನ್ನ ಕರಣವೆಲ್ಲವೂ ನಿನಗೆ ಸಂಬಂಧಪಟ್ಟದ್ದೇ ಆಗಲಿ ॥

ಅತ್ಯಂತ ಶುದ್ಧವಾದ ಜ್ಞಾನವೇ ಮೂರ್ತಿಯಾಗುಳ್ಳ ಷಡ್ಗುಣೈಶ್ವರ್ಯ

ಪ್ರಸನ್ನಂ ಪಾಹಿಮಾಂ ರಾಮ ಯಾಸ್ಯಾಮಿ ತ್ವದನುಜ್ಞಯಾ |
ದೇವಲೋಕಂ ರಘುಶ್ರೇಷ್ಠ ಮಾಯಾಮಾಂ ಮಾವೃಣೋತು ತೇ ||೩೭||

ಇತಿ ವಿಜ್ಞಾಪಿತಸ್ತೇನ ಪ್ರಸನ್ನೋ ರಘುನಂದನಃ |
ದದೌ ವರಂ ತದಾ ಪ್ರೀತೋ ವಿರಾಧಾಯ ಮಹಾಮತಿಃ ||೩೮||

ಗಚ್ಛ ವಿದ್ಯಾಧರಶ್ರೇಷ್ಠ ಮಾಯಾದೋಷಗುಣಾ ಜಿತಾಃ |
ತ್ವಯಾ ಮದ್ದರ್ಶನಾತ್ ಸದ್ಯೋ ಮುಕ್ತೋ ಜ್ಞಾನವತಾಂ ವರಃ ||೩೯||

ಮದ್ಭಕ್ತಿರ್ದುರ್ಲಭಾ ಲೋಕೇ ಜಾತಾ ಚೇನ್ಮುಕ್ತಿದಾಯಕಃ |
ಅತ ಸ್ತ್ವಂ ಭಕ್ತಿಸಂಪನ್ನಃ ಪರಂ ಯಾಹಿ ಮಮಾಜ್ಞಯಾ ||೪೦||

---

ಸಂಪನ್ನನಾಗಿ ತನ್ನಲ್ಲೇ ರಮಿಸುತ್ತಾ ಯೋಗಿಗಳಿಗೆ ಕ್ರೀಡಾಸ್ಥಾನನಾಗಿ ಸೀತೆಯೊಡನೆ ವಿಹರಿಸುವಂಥ ಜಗತ್ಕರ್ತೃವಾದ ನಿನಗೋಸುಗ ನಮಸ್ಕಾರವು ||೩೬||

ಎಲೈ ರಾಮಸ್ವಾಮಿಯೇ! ಶರಣಾಗತನಾಗಿರುವ ನನ್ನನ್ನು ಪಾಲಿಸುವನಾಗು. ನಿನ್ನ ಅನುಜ್ಞೆಯಿಂದ ನಾನೀಗ ದೇವಲೋಕವನ್ನು ಹೊಂದುವೆನು. ನಿನ್ನ ಮಾಯೆಯು ನನ್ನನ್ನು ಆವರಿಸಬೇಡ ||೩೭||

ಎಂದು ವಿದ್ಯಾಧರನಿಂದ ವಿಜ್ಞಾಪಿಸಲ್ಪಟ್ಟವನಾದಕಾರಣ ಪ್ರಸನ್ನನಾಗಿ ಸಂತುಷ್ಟನಾದಕಾರಣ ಮಹತ್ತಾದ ಬುದ್ಧಿಯುಳ್ಳ ಆ ರಘುನಂದನನು ಆಗ ವಿರಾಧನಿಗೆ ವರವನ್ನು ಕೊಟ್ಟನು ||೩೮||

ಅದೆಂತೆಂದರೆ—ಎಲೈ ವಿದ್ಯಾಧರನೇ ಹೋಗು. ನನ್ನ ಮಾಯಾ ದೋಷದಿಂದ ಉಂಟಾದ ಗುಣಗಳು ನಿನ್ನಿಂದ ಜಯಿಸಲ್ಪಟ್ಟವು. ನನ್ನ ದರ್ಶನದಿಂದ ನೀನು ತತ್ಕ್ಷಣದಲ್ಲೇ ಜ್ಞಾನಿಗಳಲ್ಲಿ ಶ್ರೇಷ್ಠನಾಗಿ ಮುಕ್ತನಾಗಿದ್ದೀಯೆ ||೩೯||

ಯಾವ ಕಾರಣದಿಂದಲಾದರೂ ದುರ್ಲಭವಾದ ನನ್ನ ಆತ್ಮಶಕ್ತಿಯು ಹುಟ್ಟಿದೊಡನೆ ಮುಕ್ತಿಯನ್ನು ಕೊಡುವುದೋ ಅದೇ ಕಾರಣದಿಂದ ನನ್ನ ಭಕ್ತಿಯಿಂದ ಪೂರ್ಣನಾದ ನೀನು ನನ್ನಾಜ್ಞೆಯಿಂದ ಸರ್ವಪ್ರಪಂಚಾತೀತವಾದ ಮೋಕ್ಷವನ್ನು ಹೊಂದುವನಾಗು ||೪೦||

ರಾಮೇಣ ರಕ್ಷೋ ನಿಧನಂ ಸುಘೋರಂ ಶಾಪಾದ್ವಿಮುಕ್ತಿಂ
ವರದಾನ ಮೇವಂ |
ವಿದ್ಯಾಧರತ್ವಂ ಪುನ ರೇವ ಲಬ್ಧಂ ರಾಮಂ ಗೃಣನ್ನೇತಿ ನರೋ
ಖಿಲಾರ್ಥಾನ್ ||೪೧||

ಅರಣ್ಯಕಾಂಡೆ ಪ್ರಥಮಸ್ಸರ್ಗ ಸ್ಸಮಾಪ್ತಃ.



ಎಂದು ವರವನ್ನು ಕೊಟ್ಟನು. ಶ್ರೀರಾಮನಿಂದಾದ ಭಯಂಕರವಾದ ರಾಕ್ಷಸಸಂಹಾರವನ್ನೂ, ಶಾಪದಿಂದ ಬಿಡುಗಡೆಯನ್ನೂ ಈರೀತಿಯಾದ ವರಪ್ರದಾನವನ್ನೂ ಮರಳಿ ಪಡೆಯಲ್ಪಟ್ಟ ವಿದ್ಯಾಧರ ರೂಪವನ್ನೂ, ಶ್ರೀರಾಮನನ್ನೂ ಸಂಕೀರ್ತನೆಯಂ ಮಾಡುವ ಪುರುಷನು ಸರ್ವ ಇಷ್ಟಾರ್ಥಗಳನ್ನೂ ಹೊಂದುವನು ||೪೦||

ಒಂದನೇ ಸರ್ಗವು ಮುಗಿದುದು.



## ದ್ವಿತೀಯಸ್ಸರ್ಗಃ.

ಶ್ರೀ ಮಹಾದೇವಃ ||

ವಿರಾಧೇ ಸ್ವರ್ಗತೇ ರಾಮಃ ಲಕ್ಷ್ಮಣೇನ ಚ ಸೀತಯಾ |
ಜಗಾಮ ಶರಭಂಗಸ್ಯ ವನಂ ಸರ್ವಸುಖಾವಹಂ ||೧||

ಶರಭಂಗ ಸ್ತತೋ ದೃಷ್ಟ್ವಾ ರಾಮಂ ಸೌಮಿತ್ರಿಣಾ ಸಹ |
ಆಯಾಂತಂ ಸೀತಯಾ ಸಾರ್ಧಂ ಸಂಭ್ರಮಾ ದುತ್ಥಿತಸ್ಸುಧೀಃ ||೨||

ಅಭಿಗಮ್ಯ ಸುಸಂಪೂಜ್ಯ ವಿಷ್ಟರೇಷೂ ಪವೇಶಯತ್ |
ಆತಿಥ್ಯ ಮಕರೋ ತ್ತೇಷಾಂ ಕಂದಮೂಲಫಲಾದಿಭಿಃ ||೩||

ಪ್ರೀತ್ಯಾಹ ಶರಭಂಗೋಪಿ ರಾಮಂ ಭಕ್ತಪರಾಯಣಂ |
ಬಹುಕಾಲಮಿಹೈವಾಸಂ ತಪಸೇ ಕೃತನಿಶ್ಚಯಃ |
ತವ ಸಂದರ್ಶನಾಕಾಂಕ್ಷೀ ರಾಮ ತ್ವಂ ಪರಮೇಶ್ವರಃ ||೪||

---

ಶ್ರೀ ಮಹಾದೇವನು ಪಾರ್ವತಿಯನ್ನು ಕುರಿತು ಹೇಳುವನು ||

ವಿರಾಧನು ಸ್ವರ್ಗವನ್ನು ಹೊಂದಲಾಗಿ ಶ್ರೀರಾಮನು ಸೀತೆಯಿಂದಲೂ ಲಕ್ಷ್ಮಣನಿಂದಲೂ ಕೂಡಿ ಸಮಸ್ತ ಸುಖವನ್ನುಂಟುಮಾಡುವ ಶರಭಂಗಮುನೀಶ್ವರನ ವನವನ್ನು ಸೇರಿದನು ||೧||

ಬಳಿಕ ಶರಭಂಗಮುನಿಯು ಸೀತೆಯೊಡನೆ ಬರುತಲಿರುವ ಲಕ್ಷ್ಮಣಸಹಿತನಾದ ಶ್ರೀರಾಮನನ್ನು ನೋಡಿ ಶುಭವಾದ ಬುದ್ಧಿಯುಳ್ಳವನಾಗಿ ಸಂತೋಷದಿಂದೆದ್ದನು||

ಶ್ರೀರಾಮನನ್ನು ಎದುರುಗೊಂಡು ಆಶ್ರಮಕ್ಕೆ ಕರೆತಂದು ಪೂಜಿಸಿ ಆಸನಗಳಲ್ಲಿ ಕುಳ್ಳಿರಿಸಿ ಕಂದಮೂಲಫಲಾದಿಗಳಿಂದ ಆತಿಥ್ಯವನ್ನವರಿಗೆ ಮಾಡಿದನು ||೩||

ಪ್ರೀತಿಯಿಂದ ಆಶರಭಂಗನು ಭಕ್ತರಲ್ಲೇ ಮುಖ್ಯವಾಗಿ ಆಸಕ್ತನಾದ ರಾಮನನ್ನು ಕುರಿತು ಹೇಳಿದನು—ಎಲೈ ಶ್ರೀರಾಮನೇ ನೀನು ಪರಮೇಶ್ವರನಾದಕಾರಣ ನಿನ್ನ ದರ್ಶನವನ್ನಪೇಕ್ಷಿಸುವ ನಾನು ತಪಸ್ಸಿಗೋಸ್ಕರ ಮಾಡಲ್ಪಟ್ಟ ನಿಶ್ಚಯವುಳ್ಳವನಾಗಿ ಬಹುಕಾಲ ಇಲ್ಲೇ ಇದ್ದೆನು ||೪||

ಅದ್ಯ ಮತ್ತಪಸಾಂ ಸಿದ್ಧಂ ಯತ್ಪುಣ್ಯಂ ಬಹು ವಿದ್ಯತೇ |
ತತ್ಸರ್ವಂ ತವ ದಾಸ್ಯಾಮಿ ತತೋ ಮುಕ್ತಿಂ ಪ್ರಜಾಪ್ಯಹಂ ||೫||

ಸಮರ್ಪ್ಯ ರಾಮಸ್ಯ ಮಹತ್ಸುಪುಣ್ಯಫಲಂ ವಿರಕ್ತ ಶ್ಶರಭಂಗಯೋಗೀ |
ಚಿತಿಂ ಸಮಾರೋಹಯ ಮಪ್ರಮೇಯಂ ರಾಮಂ ಸಸೀತಂ ಸಹಸಾ
ಪ್ರಣಮ್ಯ ||೬||

ಧ್ಯಾಯಂ ಶ್ಚಿರಂ ರಾಮ ಮಶೇಷಹೃತ್ಸ್ಥಂ ದೂರ್ವಾದಳಶ್ಯಾಮಲ
ಮಂಬುಜಾಕ್ಷಂ |
ಚೀರಾಂಬರಂ ಸ್ನಿಗ್ಧಜಟಾಕಲಾಪಂ ಸೀತಾಸಹಾಯಾಶ್ರಿತ ಲಕ್ಷ್ಮಣಾಂತಂ||

ಕೋ ವಾ ದಯಾಳುಃ ಸ್ಮೃತಕಾಮಧೇನು ರನ್ಯೋ ಜಗತ್ಯಾಂ
ರಘುನಾಯಕಾದಹೋ |
ಸ್ಮೃತೋ ಮಯಾ ನಿತ್ಯ ಮನನ್ಯಭಾಜಾ ಜ್ಞಾತ್ವಾ ಮತಿಂ ಮೆ ಸ್ವಯ
ಮೇವ ಯಾತಃ ||೮||

---

ಈಗ ನನ್ನ ತಪದಿಂದ ಸಿದ್ಧವಾದ ಬಹಳವಾದ ಪುಣ್ಯವಾವುದಿರುವುದೋ ಅದೆಲ್ಲವನ್ನೂ ನಿನಗೆ ಕೊಡುವೆನು ಬಳಿಕ ಮುಕ್ತಿಯನ್ನು ಪಡೆವೆನು ||೫||

ಎಂದು ಹೇಳಿ ಮಹತ್ತಾದ ಶುಭವಾದ ಪುಣ್ಯದ ಫಲವನ್ನು ರಾಮನಿಗೆ ಸಮರ್ಪಿಸಿ ವಿರಕ್ತನಾದ ಶರಭಂಗಯೋಗಿಯು ಸೀತಾಸಹಿತನಾದ ರಾಮನನ್ನು ಶೀಘ್ರವಾಗಿ ನಮಿಸಿ ಚಿತಿಯನ್ನು ಹತ್ತಿದನು ||೬||

ಸಮಸ್ತ ಪ್ರಾಣಿಗಳ ಹೃದಯದಲ್ಲಿರುವಂಥಾ ದೂರ್ವಾದಳದಂತೆ ಶ್ಯಾಮಳವಾದ ದೇಹವುಳ್ಳ ನಳಿನೀದಳದಂತಿರುವ ನೇತ್ರವುಳ್ಳವನಾಗಿ, ನಾರುಬಟ್ಟೆಯೇ ವಸ್ತ್ರವಾಗುಳ್ಳವನಾಗಿಯೂ ಮನೋಹರವಾದ ಜಡೆಯೆಂಬ ಆಭರಣವುಳ್ಳವನಾಗಿ ಆಶ್ರಯಿಸಿರುವ ಸೀತಾಲಕ್ಷ್ಮಣ ಸಮೇತನಾದ ಆ ಶ್ರೀರಾಮನನ್ನು ಬಹುಕಾಲ ಧ್ಯಾನಿಸಿ ಹೇಳಿದನು ||೭||

ಶ್ರೀರಾಮನಿಗಿಂತಲೂ ಅನ್ಯನಾದವನು ಯಾವನುತಾನೇ ಲೋಕದಲ್ಲಿ ಸ್ಮರಿಸಲ್ಪಟ್ಟ ಮಾತ್ರದಿಂದಲೇ ಕಾಮಧೇನುವಿನಂತೆ ದಯಾವಂತನಾಗುವನು ? ಇತರವನ್ನು ಹೊಂದದಿರುವ ನನ್ನಿಂದ ಸರ್ವದಾ ಸ್ಮರಿಸಲ್ಪಟ್ಟ ಈ ರಾಮನು ನನ್ನ ಬುದ್ಧಿಯನ್ನು ತಿಳಿದು ತಾನಾಗಿ ಬಂದನಲ್ಲವೇ ! ||೮||

ಪಶ್ಯತ್ವಿದಾನೀಮೇವೈಷ ರಾಮೋ ದಾಶರಥಿಃ ಪ್ರಭುಃ |
ದಗ್ಧ್ವಾತ್ರ ಸ್ವದೇಹಂ ಗಚ್ಛಾಮಿ ಬ್ರಹ್ಮಲೋಕಮಕಲ್ಮಷಃ ||೯||

ಅಯೋಧ್ಯಾಧಿಪತಿರ್ಮೇಸ್ತು ಹೃದಯೇ ರಾಘವಸ್ಸದಾ |
ಯದ್ವಾಮಾಂಕೇ ಸ್ಥಿತಾ ಸೀತಾ ಮೇಘಸ್ಯೇವ ತಟಿಲ್ಲತಾ ||೧೦||

ಇತಿ ರಾಮಂ ಚಿರಂ ದೃಷ್ಟ್ವಾ ಧ್ಯಾತ್ವಾ ಚ ಪುರತಃ ಸ್ಥಿತಂ |
ಪ್ರಜ್ವಾಲ್ಯ ಸಹಸಾ ವಹ್ನಿಂ ದಗ್ಧ್ವಾ ಪಂಚಾತ್ಮಕಂ ವಪುಃ |
ದಿವ್ಯದೇಹಧರಸ್ಸಾಕ್ಷಾದ್ಯಯೌ ಲೋಕಪತೇಃ ಪದಂ ||೧೧||

ತತೋ ಮುನಿಗಣಾಸ್ಸರ್ವೇ ದಂಡಕಾರಣ್ಯವಾಸಿನಃ |
ಆಜಗ್ಮೂ ರಾಘವಂ ದ್ರಷ್ಟುಂ ಶರಭಂಗನಿವೇಶನಂ ||೧೨||

ದೃಷ್ಟ್ವಾ ಮುನಿಸಮೂಹಂ ತಂ ಜಾನಕೀರಾಮಲಕ್ಷ್ಮಣಾಃ |
ಪ್ರಣೇಮುಸ್ಸಹಸಾ ಭೂಮೌ ಮಾಯಾಮಾನುಷರೂಪಿಣಃ ||೧೩||

---

ದಶರಥಪುತ್ರನಾದ ಪ್ರಭುವಾದ ಈ ರಾಮನು ಈಗಲೇ ನೋಡುತ್ತಿರಲಿ, ನಾನು ನನ್ನ ಶರೀರವನ್ನು ದಹಿಸಿಕೊಂಡು ನಿಷ್ಕಲ್ಮಷನಾಗಿ ಬ್ರಹ್ಮಲೋಕವನ್ನು ಹೊಂದುವೆನು ||೯||

ಮೇಘದೊಳಗೆ ಮಿಂಚಿನ ಬಳ್ಳಿಯಂತೆ ಯಾವನ ಎಡದೊಡೆಯಲ್ಲಿ ಸೀತೆಯು ಇರುವಳೊ ಅಯೋಧ್ಯಾಧಿಪತಿಯಾದ ಆಶ್ರೀರಾಮನು ಸರ್ವದಾ ನನ್ನಹೃದಯದಲ್ಲಿರಲಿ||

ಎಂದು ಹೇಳುತ್ತಾ ಶ್ರೀರಾಮಚಂದ್ರನನ್ನು ಬಹಳಹೊತ್ತು ನೋಡಿ ಎದುರಿಗಿರುವ ಆ ರಾಮನನ್ನು ಹೃದಯದಲ್ಲಿ ಧ್ಯಾನಿಸಿ, ಜಾಗ್ರತೆಯಾಗಿ ಅಗ್ನಿಯನ್ನು ಜ್ವಾಲಾಯುಕ್ತವಾಗಿ ಮಾಡಿ ಪಂಚಭೂತಾತ್ಮಕವಾದ ದೇಹವನ್ನು ದಹಿಸಿ, ಪ್ರತ್ಯಕ್ಷವಾಗಿ ದಿವ್ಯವಾದ ದೇಹವನ್ನು ಧರಿಸಿ ಲೋಕಾಧಿಪತಿಯಾದ ಬ್ರಹ್ಮನ ಸ್ಥಾನವನ್ನು ಹೊಂದಿದನು ||೧೧||

ಬಳಿಕ ದಂಡಕಾರಣ್ಯದಲ್ಲಿ ವಾಸವನ್ನು ಮಾಡಿಕೊಂಡಿರುವ ಮುನಿಸಮೂಹಗಳೆಲ್ಲವೂ ಶ್ರೀರಾಮನನ್ನು ನೋಡಲೋಸುಗ ಶರಭಂಗಮುನಿಯ ಆಶ್ರಮವನ್ನು ಕುರಿತು ಬಂದರು ||೧೨||

ಮಾಯೆಯಿಂದ ಮನುಷ್ಯರೂಪರಾದ ಸೀತಾರಾಮಲಕ್ಷ್ಮಣರು ಆ ಮುನಿಸಮೂಹವನ್ನು ನೋಡಿ ಶೀಘ್ರವಾಗಿ ಭೂಮಿಯಲ್ಲಿ ನಮಸ್ಕಾರವನ್ನು ಮಾಡಿದರು ||

ಆಶೀರ್ಭಿರಭಿನಂದ್ಯಾಥ ರಾಮಂ ಸರ್ವಹೃದಿಸ್ಥಿತಂ |
ಊಚುಃ ಪ್ರಾಂಜಲಯಸ್ಸರ್ವೇ ಧನುರ್ಬಾಣಧರಂ ಹರಿಂ ||೧೪||

ಭೂಮೇರ್ಭಾರಾವತಾರಾಯ ಜಾತೋಸಿ ಬ್ರಹ್ಮಣಾರ್ಥಿತಃ |
ಜಾನೀಮಸ್ತ್ವಾಂ ಹರಿಂ ಲಕ್ಷ್ಮೀಂ ಜಾನಕೀಂ ಲಕ್ಷ್ಮಣಂ ತಥಾ ||೧೫||

ಶೇಷಾಂಶಂ ಶಂಖಚಕ್ರೇ ದ್ವೇ ಭರತಂ ಸಾನುಜಂ ತಥಾ |
ಅತ ಆದಾ ವೃಷೀಣಾಂ ತ್ವಂ ದುಃಖಂ ಹರ್ತುಮಿಹಾರ್ಹಸಿ ||೧೬||

ಆಗಚ್ಛ ಯಾಮೊ ಮುನಿಸೇವಿತಾನಿ ವನಾನಿ ಸರ್ವಾಣಿ ರಘೂತ್ತಮ
ಕ್ರಮಾತ್ |
ದ್ರಷ್ಟುಂ ಸುಮಿತ್ರಾಸುತಜಾನಕೀಭ್ಯಾಂ ತದಾ ಯದಸ್ಮಾಸು ದೃಢಾ
ಭವಿಷ್ಯತಿ ||೧೭||

ಇತಿ ವಿಜ್ಞಾಪಿತೊ ರಾಮಃ ಕೃತಾಂಜಲಿಪುಟೈರ್ಮುನಿಭಿಃ |
ಜಗಾಮ ಮುನಿಭಿಸ್ಸಾರ್ಧಂ ದ್ರಷ್ಟುಂ ಮುನಿವನಾನಿ ಸಃ ||೧೮||

---

ಬಳಿಕ ಸರ್ವಪ್ರಾಣಿಗಳ ಹೃದಯದಲ್ಲಿರುವ ರಾಮನನ್ನವರು ಆಶೀರ್ವಾದಗಳಿಂದ ಸಂತೋಷಪಡಿಸಿ, ಧನುರ್ಬಾಣಗಳನ್ನು ಧರಿಸಿರುವ ಆ ಹರಿಯನ್ನು ಕುರಿತು ಆ ಋಷಿಗಳೆಲ್ಲರೂ ಕೃತಾಂಜಲಿಗಳಾಗಿ ಹೇಳಿದರು ||೧೪||

ಎಲೈ ಶ್ರೀರಾಮನೇ? ಭೂಮಿಯ ಭಾರವನ್ನು ಇಳುಹಲೋಸುಗ ಬ್ರಹ್ಮನಿಂದ ಪ್ರಾರ್ಥಿತನಾಗಿ ಹುಟ್ಟಿದ್ದೀಯೆ, ನಿನ್ನನ್ನು ಹರಿಯನ್ನಾಗಿಯೂ, ಲಕ್ಷ್ಮಿಯನ್ನು ಜಾನಕಿಯನ್ನಾಗಿಯೂ, ಹಾಗೆಯೇ ಲಕ್ಷ್ಮಣನನ್ನು ||೧೫||

ಶೇಷನನ್ನಾಗಿಯೂ ಹಾಗೆಯೇ ಶತ್ರುಘ್ನಸಹಿತನೊದ ಭರತನನ್ನು ಎರಡು ಶಂಖಚಕ್ರಗಳನ್ನಾಗಿಯೂ ತಿಳಿದಿದ್ದೇವೆ. ಆದುದರಿಂದ ನೀನು ಆಧಿಯೋಳ್ ಇಲ್ಲಿರುವ ಋಷಿಗಳ ದುಃಖವನ್ನು ಪರಿಹರಿಸು ||೧೬||

ಎಲೈ ರಘೂತ್ತಮನೇ! ಮುನಿಗಳಿಂದ ಸೇವಿತವಾದ ವನಗಳೆಲ್ಲವನ್ನೂ ಕ್ರಮವಾಗಿ ನೋಡಲೋಸುಗ ಲಕ್ಷ್ಮಣ ಜಾನಕಿಯರೊಡನೆ ಬರುವನಾಗು. ನಾವು ಹೋಗೋಣ, ಎಲ್ಲವನ್ನೂ ನೋಡಿದಾಗ ನಿನಗೆ ನಮ್ಮಲ್ಲಿ ದಯೆಯು ದೃಢವಾಗುತ್ತದೆ ||೧೭||

ಎಂದು ಕೃತಾಂಜಲಿಗಳಾದ ಮುನಿಗಳಿಂದ ವಿಜ್ಞಾಪಿಸಲ್ಪಡಲು ಪ್ರಭುವಾದ

ದದರ್ಶ ತತ್ರ ಪತಿತಾನ್ಯನೇಕಾನಿ ಶಿರಾಂಸಿ ಸಃ |
ಅಸ್ಥಿಭೂತಾನಿ ಸರ್ವತ್ರ ರಾಮೋ ವಚನಮಬ್ರವೀತ್ ||೧೯||

ಅಸ್ಥೀನಿ ಕೇಷಾಂ ಏತಾನಿ ಕಿಮರ್ಥಂ ಪತಿತಾನಿ ವೈ |
ತಮೂಚುರ್ಮುನಯೋ ರಾಮಮೃಷೀಣಾಂ ಮಸ್ತಕಾನಿ ಹಿ ||೨೦||

ರಾಕ್ಷಸೈರ್ಭಕ್ಷಿತಾನೀಶ ಪ್ರಮತ್ತಾನಾಂ ಸಮಾಧಿತಃ |
ಅಂತರಾಯಂ ಮುನೀನಾಂ ತೇ ಪಶ್ಯಂತೋಽನುಚರಂತಿ ಹಿ ||೨೧||

ಶ್ರುತ್ವಾ ವಾಕ್ಯಂ ಮುನೀನಾಂ ಸ ಭಯದೈನ್ಯಸಮನ್ವಿತಂ |
ಪ್ರತಿಜ್ಞಾಮಕರೋದ್ರಾಮೋ ವಧಾಯಾಶೇಷರಕ್ಷಸಾಂ ||೨೨||

ಪೂಜ್ಯಮಾನಸ್ತದಾ ತತ್ರ ಮುನಿಭಿರ್ವನವಾಸಿಭಿಃ |
ಜಾನಕ್ಯಾ ಸಹಿತೋ ರಾಮೋ ಲಕ್ಷ್ಮಣೇನ ಸಮನ್ವಿತಃ |
ಉವಾಸ ಕತಿಚಿತ್ತತ್ರ ವರ್ಷಾಣಿ ರಘುನಂದನಃ ||೨೩||

---

ಆ ಶ್ರೀರಾಮನು ಮುನಿಗಳ ವನವನ್ನು ನೋಡಲೋಸುಗ ಆ ಮುನಿಗಳೊಡನೆ ಹೊರಟನು ||೧೮||

ಅಲ್ಲಿ ಎಲ್ಲಾ ಕಡೆಯಲ್ಲಿಯೂ ಮೂಳೆಗಳಾಗಿ ಬಿದ್ದಿರುವ ಅನೇಕವಾದ ಶಿರಸ್ಸುಗಳನ್ನು ಆ ರಾಮನು ಕಂಡನು. ಬಳಿಕ ಮಾತನಾಡಿದನು ||೧೯||

ಇವುಗಳು ಯಾರ ಮೂಳೆಗಳು ? ಏಕೆ ಬಿದ್ದಿರುವುವು ? ಎಂದು ರಾಮನು ಕೇಳಲು ಮುನಿಗಳು ಅದನ್ನು ಹೇಳಿದರು, ಎಲೈ ಶ್ರೀರಾಮನೇ ಇವುಗಳು ಮುನಿಗಳ ತಲೆಗಳು ||೨೦||

ಎಲೈ ಈಶ್ವರನೇ, ಸಮಾಧಿಯುಳ್ಳಿರುವಾಗ ರಾಕ್ಷಸರಿಂದ ಭಕ್ಷಿಸಲ್ಪಟ್ಟವು, ಆ ರಾಕ್ಷಸರು ಮುನಿಗಳ ಈ ಸಮಯವನ್ನೇ ನೋಡುತ್ತಾ ಸಂಚರಿಸುವರು ||

ಎಂದವರು ಹೇಳುವಲ್ಲಿ ಭಯದೈನ್ಯಗಳಿಂದ ಕೂಡಿರುವ ಮುನಿಗಳ ಮಾತನ್ನು ಕೇಳಿ ರಾಮನು ಸಮಸ್ತರಾದ ರಾಕ್ಷಸರ ಸಂಹಾರಕ್ಕೋಸುಗ ಪ್ರತಿಜ್ಞೆಯನ್ನು ಮಾಡಿದನು ||೨೧||

ಅಲ್ಲಿ ಯಾಗವನವಾಸಿಗಳಾದ ಮುನಿಗಳಿಂದ ಪೂಜಿಸಲ್ಪಡುವ ರಘುನಂದನನಾದ ಶ್ರೀರಾಮನು ಸೀತಾಸಹಿತನಾಗಿಯೂ, ಲಕ್ಷ್ಮಣನಿಂದ ಕೂಡಿದವನಾಗಿಯೂ ಆ ವನಗಳಲ್ಲೇ ಕೆಲವು ವರ್ಷಗಳಿದ್ದನು ||೨೩||

ಏವಂ ಕ್ರಮೇಣ ಸಂಪಶ್ಯನ್ ಋಷೀಣಾಮಾಶ್ರಮಾನ್ವಿಭುಃ ।
ಸುತೀಕ್ಷ್ಣಸ್ಯಾಶ್ರಮಂ ಪ್ರಾಗಾತ್ಪ್ರಖ್ಯಾತಮುನಿಸಂಕುಲಂ ।
ಸರ್ವರ್ತುಗುಣಸಂಪನ್ನಂ ಸರ್ವಕಾಲಸುಖಾವಹಂ ॥೨೪॥

ರಾಮಮಾಗತಮಾಕರ್ಣ್ಯ ಸುತೀಕ್ಷ್ಣಸ್ಸ್ವಯಮಾಗತಃ ।
ಅಗಸ್ತ್ಯಶಿಷ್ಯೋ ರಾಮಸ್ಯ ಮಂತ್ರೋಪಾಸನತತ್ಪರಃ ।
ವಿಧಿವತ್ಪೂಜಯಾಮಾಸ ಭಕ್ತ್ಯುತ್ಕಂಠಿತಲೋಚನಃ ॥ ೨೫॥

ಸುತೀಕ್ಷ್ಣಃ ॥

ತ್ವನ್ಮಂತ್ರಜಾಪ್ಯಹಮನಂತಗುಣಾಪ್ರಮೇಯ ಸೀತಾಪತೇ ಶಿವವಿರಿಂಚಿ ಸಮಾಶ್ರಿತಾಂಘ್ರೇ ।
ಸಂಸಾರಸಿಂಧುತರಣಾಮಲಪೋತಪಾದ ರಾಮಾಭಿರಾಮ ಸತತಂ ತವ ದಾಸದಾಸಃ ॥೨೬॥

---

ಈರೀತಿಯಾಗಿ ಕ್ರಮದಿಂದ ಮುನಿಗಳ ಆಶ್ರಮವನ್ನು ನೋಡುತ್ತಾ ಶ್ರೀಮಂತನಾದ ಜಗತ್ಪ್ರಭುವಾದ ಶ್ರೀರಾಮಚಂದ್ರನು ಸಮಸ್ತವಾದ ಋತುಗಳ ಶುಭಗಳಿಂದ ಕೂಡಿರುವುದಾದಕಾರಣ ಸರ್ವಕಾಲದಲ್ಲೂ ಸುಖವನ್ನುಂಟುಮಾಡುವ ಪ್ರಖ್ಯಾತರಾದ ಮುನಿಗಳಿಂದ ವ್ಯಾಪ್ತವಾಗಿರುವ ಸುತೀಕ್ಷ್ಣಮುನಿಯ ಆಶ್ರಮವನ್ನು ಸೇರಿದನು ||೨೪||

ಶ್ರೀರಾಮನ ಮಂತ್ರದ ಉಪಾಸನೆಯಲ್ಲೇ ಆಸಕ್ತನಾಗಿ ಅಗಸ್ತ್ಯ ಮಹಾಮುನಿಗೆ ಶಿಷ್ಯನಾದ ಸುತೀಕ್ಷ್ಣ ಮುನಿಯು ಶಿಷ್ಯರ ಮುಖದಿಂದ ರಾಮನು ಬಂದಿರುವುದನ್ನು ಕೇಳಿ ಭಕ್ತಿಯಿಂದ ಅತಿ ಕುತೂಹಲಪಡುವ ನೇತ್ರಗಳುಳ್ಳವನಾದಕಾರಣ ತಾನೇ ಎದುರುಗೊಂಡು ಬಂದವನಾಗಿ ಯಥಾವಿಧಿ ಪೂಜಿಸಿದನು ||೨೫||

ಬಳಿಕ ಇಂತು ಹೇಳಿದನು, ಅಸಂಖ್ಯವಾದ ಗುಣಗಳುಳ್ಳವನಾದ್ದರಿಂದ ಅಪ್ರಮೇಯನಾದವನೇ, ಸೀತೆಗೆ ಪತಿಯಾದವನೇ, ಶಿವನಿಂದಲೂ ಬ್ರಹ್ಮನಿಂದಲೂ ಆಶ್ರಯಿಸಲ್ಪಟ್ಟ ಪಾದಕಮಲವುಳ್ಳವನೇ, ಸಂಸಾರವೆಂಬ ಸಮುದ್ರವನ್ನು ದಾಟುವುದಕ್ಕೆ ನಿರ್ಮಲವಾದ ನಾವೆಯಾದ ಪಾದವುಳ್ಳವನೇ, ಸಕಲಲೋಕಗಳಿಗೂ ಮನೋಹರನಾದ ಶ್ರೀರಾಮನೇ ನಿನ್ನ ಮಂತ್ರವನ್ನು ಜಪಿಸುವ ನಾನು ಸರ್ವಕಾಲದಲ್ಲೂ ನಿನ್ನ ದಾಸರಿಗೂ ದಾಸನಾಗಿರುವೆನು ||೨೬||

ಮಾಮದ್ಯ ಸರ್ವಜಗತಾಮಪಿ ಗೋಚರಸ್ತ್ವಂ ತ್ವನ್ಮಾಯಯಾ
ಸುತಕಳತ್ರಗೃಹಾಂಧಕೂಪೇ |
ಮಗ್ನಂ ನಿರೀಕ್ಷ್ಯ ಮಲಮುದ್ಗಲಪಿಂಡಮೋಹ ಪಾಶಾನುಬದ್ಧಹೃದಯಂ
ಸ್ವಯ ಮಾಗತೋಸಿ ||೨೭||

ತ್ವಂ ಸರ್ವಭೂತಹೃದಯೇಷು ಕೃತಾಲಯೋಪಿ ತ್ವನ್ಮಂತ್ರಜಾಪವಿಮು
ಖೇಷು ತನೋಷಿ ಮಾಯಾಂ |
ತ್ವನ್ಮಂತ್ರಸಾಧನಪರೇಷ್ವಪಯಾತಿ ಮಾಯಾ ಸೇವಾನುರೂಪಫಲದೋಸಿ
ಯಥಾನುರಾಗಂ ||೨೮||

ವಿಶ್ವಸ್ಯ ಸೃಷ್ಟಿಲಯಸಂಸ್ಥಿತಿಹೇತುರೇಕಸ್ತ್ವಂ ಮಾಯಯಾತ್ರಿಗುಣಯಾ
ವಿಧೀಶವಿಷ್ಣೂ |
ಭಾಸೀಶ ಮೋಹಿತಧಿಯಾಂ ವಿವಿಧಾಕೃತಿಸ್ತ್ವಂ ಯದ್ವದ್ರವಿಸ್ಸಲಿಲ
ಪಾತ್ರಗತೋಹ್ಯನೇಕಃ ||೨೯||

---

ಈಗ ಸಮಸ್ತವಾದ ಜಗತ್ತುಗಳಿಗೂ ಗೋಚರನಾಗಿರುವ ನೀನು ನಿನ್ನ ಮಾಯೆಯಿಂದ ಪುತ್ರ ಪತ್ನೀ ಗೃಹಗಳೆಂಬ ಕತ್ತಲೆಯ ಭಾವಿಯಲ್ಲಿ ಮುಳುಗಿ ಮಲದಿಂದ ಪೂರ್ಣವಾಗಿ ಶಿಥಿಲವಾಗುವ ದೇಹವೆಂಬ ಪಿಂಡದಲ್ಲಿ ಮೋಹವೆಂಬ ಹಗ್ಗದಿಂದ ಕಟ್ಟಲ್ಪಟ್ಟ ಹೃದಯವುಳ್ಳ ನನ್ನನ್ನು ಉದ್ಧರಿಸಲೋಸುಗ ನೀನಾಗಿ ಬಂದಿದ್ದೀಯೆ ||

ಸಮಸ್ತ ಪ್ರಾಣಿಗಳ ಹೃದಯದಲ್ಲಿ ಮಾಡಿಕೊಳ್ಳಲ್ಪಟ್ಟ ಮನೆಯುಳ್ಳವನಾದಾಗ್ಯೂ ನಿನ್ನ ಮಂತ್ರದ ಜಪದಲ್ಲಿ ವಿಮುಖರಾದವರಲ್ಲಿ ಮಾಯೆಯನ್ನು ವಿಸ್ತಾರಪಡಿಸುತ್ತೀಯೆ ನಿನ್ನ ಮಂತ್ರದ ಸಾಧಕರಲ್ಲಿ ಆ ಮಾಯೆಯು ಹೋಗುವುದು. ಅಪೇಕ್ಷೆಯಿದ್ದಂತೆ ಸೇವೆಗೆ ಸರಿಯಾದ ಫಲವನ್ನು ನೀನು ಕೊಡುತ್ತೀಯೆ ||

ಎಲೈ ಶ್ರೀರಾಮನೇ! ನೀನು ಅದ್ವಿತೀಯನಾದವನು. ಆದರೂ ಸ್ವಾಭಾವಿಕವಾದ ಜ್ಞಾನಾದಿ ಶಕ್ತಿಗಳಿಂದ ಪ್ರಪಂಚರೂಪನಾಗಿ ಪ್ರಕಾಶಿಸುತ್ತಾ ಪ್ರಪಂಚವು ನಿನಗೆ ಭಿನ್ನವೆಂಬ ಮೂಲಜ್ಞಾನವೇ ಸ್ವರೂಪವಾಗುಳ್ಳ ತ್ರಿಗುಣಾತ್ಮಕವಾದ ಮಾಯೆಯಿಂದ ಪ್ರಪಂಚದ ಸೃಷ್ಟಿಲಯಸ್ಥಿತಿಗಳಿಗೆ ಕಾರಣನಾಗಿ ವಿಧಿಯೆಂತಲೂ, ಶಿವ ವಿಷ್ಣುಗಳೆಂತಲೂ, ಜಲಪಾತ್ರೆಗಳಲ್ಲಿರುವ ಸೂರ್ಯನಂತೆ ಅನೇಕನಾಗಿಯೂ, ನಾನಾವಿಧ ರೂಪವುಳ್ಳವನಾಗಿಯೂ, ಮೋಹಿತವಾದ ಬುದ್ಧಿಯುಳ್ಳವರಿಗೆ ಪ್ರಕಾಶಿಸುತ್ತೀಯೆ ||೨೯||

ಪ್ರತ್ಯಕ್ಷತೋದ್ಯ ಭವತಶ್ಚರಣಾರವಿಂದಂ ಪಶ್ಯಾಮಿ ರಾಮ ತಮಸಃ
ಪರತಸ್ಥಿತಸ್ಯ |
ದೃಗ್ರೂಪತಸ್ತ್ವಮಸತಾಮಪಿಗೋಚರೋಽಪಿ ತ್ವನ್ಮಂತ್ರಪೂತ ಹೃದಯೇಷು
ಸದಾ ಪ್ರಸನ್ನಃ ||೩೦||

ಪಶ್ಯಾಮಿ ರಾಮ ತವ ರೂಪಮರೂಪಿಣೋಽಪಿ ಮಾಯಾವಿಡಂಬನಕೃತಂ
ಸುಮನುಷ್ಯವೇಷಂ |
ಕಂದರ್ಪಕೋಟಿಸುಭಗಂ ಕಮನೀಯಚಾಪಬಾಣಂ ದಯಾರ್ದ್ರಹೃದಯಂ
ಸ್ಮಿತಚಾರುವಕ್ತ್ರಂ ||೩೧||

ಸೀತಾಸಮೇತಮ ಜಿನಾಂಬರಮಪ್ರಧೃಷ್ಯಂ ಸೌಮಿತ್ರಿಣಾ ನಿಯತಸೇವಿತ
ಪಾದಪದ್ಮಂ |
ನೀಲೋತ್ಪಲದ್ಯುತಿಮನಂತಗುಣಾಪ್ರಮೇಯಂ ಮದ್ಭಾಗಧೇಯ ಮನಿಶಂ
ಪ್ರಣಮಾಮಿ ರಾಮಂ ||೩೨||

---

ಎಲೈ ಶ್ರೀರಾಮಚಂದ್ರನೇ! ಮೂಲಜ್ಞಾನರೂಪವಾದ ತಮಸ್ಸಿಗೆ ದೂರದಲ್ಲಿರುವನಾದಾಗ್ಯೂ ನಿನ್ನ ಚರಣಕಮಲವನ್ನು ಈಗ ಪ್ರತ್ಯಕ್ಷವಾಗಿ ನೋಡುವೆನು. ದೃಗ್ರೂಪದಿಂದ ನೀನು ಅಜ್ಞಾನಿಗಳಿಗೆ ಗೋಚರನಲ್ಲದಿದ್ದಾಗ್ಯೂ ನಿನ್ನ ಮಂತ್ರದಿಂದ ಪವಿತ್ರವಾದ ಹೃದಯವುಳ್ಳ ಜನಗಳಲ್ಲಿ ಸರ್ವದಾ ಪ್ರಸನ್ನನಾಗಿ ಗೋಚರನಾಗಿದ್ದೀಯೆ ||೩೦||

ಎಲೈ ಶ್ರೀರಾಮನೇ, ಸ್ವತಃ ರೂಪವಿಲ್ಲದವನಾದಾಗ್ಯೂ ಮಾಯೆಯಿಂದ ಲೋಕವಿಡಂಬನಕ್ಕೋಸ್ಕರ ಮಾಡಲ್ಪಟ್ಟು ಏಕೀಭವಿಸಿದ ಮನ್ಮಥಕೋಟಿಗಳ ಸೌಂದರ್ಯದಂತೆ ಶುಭದರ್ಶನವಾಗಿ ಶೋಭನವಾದ ಮನುಷ್ಯದೇಹವುಳ್ಳ ಮನೋಹರವಾದ ಧನುರ್ಬಾಣಗಳಿಂದ ಕೂಡಿದವನಾಗಿ, ದಯೆಯಿಂದ ಶಾಂತವಾದ ಹೃದಯವುಳ್ಳವನಾಗಿ, ಮುಗುಳುನಗೆಯಿಂದ ಮನೋಹರವಾದ ಮುಖವುಳ್ಳ ನಿನ್ನ ರೂಪವನ್ನು ನಾನು ನೋಡುವೆನು ||೩೧||

ಸೀತೆಯಿಂದ ಸಹಿತನಾಗಿಯೂ, ಕೃಷ್ಣಾಜಿನವೇ ವಸ್ತ್ರವಾಗಿಯೂ, ಶತ್ರುಗಳಿಗೆ ತಿರಸ್ಕರಿಸಲಶಕ್ಯವಾಗಿಯೂ, ಲಕ್ಷ್ಮಣನಿಂದ ಸರ್ವಕಾಲದಲ್ಲೂ ಸೇವಿಸಲ್ಪಟ್ಟ ಪಾದಪದ್ಮವುಳ್ಳವನಾಗಿಯೂ, ಕನ್ನೈದಿಲೆಗೆ ಸಮಾನವಾದ ಕಾಂತಿಯುಳ್ಳವನಾ

ಜಾನಂತು ರಾಮ ತವ ರೂಪಮಶೇಷ ದೇಶಕಾಲಾದ್ಯುಪಾಧಿರಹಿತಂ
ಘನಚಿತ್ಪ್ರಕಾಶಂ |
ಪ್ರತ್ಯಕ್ಷತೋಽದ್ಯ ಮಮ ಗೋಚರಮೇತದೇವ ರೂಪಂ ವಿಭಾತು ಹೃದಯೆ
ನ ಪರಂ ವಿಕಾಂಕ್ಷೆ ||೩೩||

ಇತ್ಯೇವಂ ಸ್ತುವತಸ್ತಸ್ಯ ರಾಮಸ್ಸ್ಮಿತಮಭ್ರವೀತ್ |
ಮುನೇ ಜಾನಾಮಿತೇ ಚಿತ್ತಂ ನಿರ್ಮಲಂ ಮದುಪಾಸನಾತ್ ||೩೪||

ಅತೋಽಹಮಾಗತೋ ದ್ರಷ್ಟುಂ ಮದೃತೆ ನಾನ್ಯಸಾಧನಂ |
ಮನ್ಮಂತ್ರೋಪಾಸಕಾ ಲೋಕೆ ಮಾಮೇವ ಶರಣಂಗತಾಃ ||೩೫||

ನಿರಪೇಕ್ಷಾ ನಾನ್ಯಗತಾಸ್ತೇಷಾಂ ದೃಶ್ಯೋಽಹಮನ್ವಹಂ |
ಸ್ತೋತ್ರಮೆತತ್ಪಠೇದ್ಯಸ್ತು ತ್ವತ್ಕೃತಂ ಮತ್ಪ್ರಿಯಂ ಸದಾ |
ಸದ್ಭಕ್ತಿರ್ಮೆ ಭವೇತ್ತಸ್ಯ ಜ್ಞಾನಂ ಚ ವಿಮಲಂಭವೇತ್ ||೩೬||

---

ಗಿಯೂ ಎಣಿಸಲಶಕ್ಯವಾದ ಗುಣವುಳ್ಳವನಾದುದರಿಂದ ತಿಳಿಯಲಶಕ್ಯನಾಗಿಯೂ, ನಾನೆಂಬ ಜ್ಞಾನವುಳ್ಳವರೆಲ್ಲರಿಗೂ ಪೂರ್ವಪುಣ್ಯಸ್ವರೂಪನಾಗಿರುವ ಶ್ರೀರಾಮನನ್ನು ನಿತ್ಯದಲ್ಲೂ ನಮಿಸುವೆನು ||೩೨||

ಎಲೈ ಶ್ರೀರಾಮನೇ ಗಟ್ಟಿಯಾದ ಜ್ಞಾನರೂಪದಿಂದ ಪ್ರಕಾಶಿಸುತಲ್ಲಿ ಸಮಸ್ತವಾದ ದೇಶಕಾಲಾದ್ಯುಪಾಧಿಗಳಿಲ್ಲದ ಸತತ್ತ್ವಮಾತ್ರವನ್ನೇ ನಿನ್ನ ರೂಪವನ್ನಾಗಿ ಪಂಡಿತರು ತಿಳಿಯುವರು. ಈಗ ಪ್ರತ್ಯಕ್ಷವಾಗಿ ಗೋಚರವಾಗಿರುವ ಈ ರೂಪವೇ ನನ್ನ ಹೃದಯದಲ್ಲಿ ಪ್ರಕಾಶಿಸಲಿ. ನಾನು ಇನ್ನೊಂದನ್ನೂ ಅಪೇಕ್ಷಿಸುವುದಿಲ್ಲ ||೩೩||

ಎಂದು ಈರೀತಿಯಾಗಿ ಸುತೀಕ್ಷ್ಣಮುನಿಯು ಸ್ತುತಿಸುವ ಸಮಯದಲ್ಲಿ ಶ್ರೀರಾಮನು ಮುಗುಳುನಗೆಯಿಂದ ಕೂಡಿ ಹ್ಯಾಗೋ ಹಾಗೆ ಹೇಳಿದನು. ಎಲೈ ಮುನಿಯೇ, ನನ್ನ ಉಪಾಸನೆಯಿಂದ ನಿನ್ನ ಮನವು ನಿರ್ಮಲವಾಗಿದೆಯೆಂದು ನಾನು ತಿಳಿದಿರುವೆನು ||೩೪||

ಆದುದರಿಂದ ನಾನು ನಿನ್ನನ್ನು ನೋಡಲು ಬಂದೆನು. ಸರ್ವೋತ್ತಮವಾದ ಶ್ರೇಯಸ್ಸನ್ನು ಪಡೆಯತಕ್ಕವರಿಗೆ ನನಗಿಂತಲೂ ಭಿನ್ನವಾದ ಸಾಧನವಿಲ್ಲ. ಲೋಕದಲ್ಲಿ ನನ್ನ ಮಂತ್ರೋಪಾಸನೆಯನ್ನು ಮಾಡುವವರು ನನ್ನನ್ನೇ ಶರಣುಹೊಂದಿರುವರು ||೩೫||

ಯಾರು ನಿರಪೇಕ್ಷಕರಾಗಿ ಇತರಜ್ಞಾನವಿಲ್ಲದಿರುವರೋ ಅವರಿಗೆ ನಾನು

ತ್ವಂ ಮಮೋಪಾಸನಾದೇವ ವಿಮುಕ್ತೋಽಸೀಹ ಸರ್ವಶಃ |
ದೇಹಾಂತೆ ಮಮ ಸಾಯುಜ್ಯಂ ಲಪ್ಸ್ಯಸೆ ನಾತ್ರಸಂಶಯಃ ||೩೭||

ಗುರುಂ ತೆ ದ್ರಷ್ಟುಮಿಚ್ಛಾಮಿ ಹ್ಯಗಸ್ತ್ಯ ಮುನಿನಾಯಕಂ |
ಕಂಚಿತ್ಕಾಲಂ ತತ್ರ ವಸ್ತುಂ ಮನೋ ಮೆ ತ್ವರಯತ್ಯಲಂ ||೩೮||

ಸುತೀಕ್ಷ್ಣೋಽಪಿ ತಥೇತ್ಯಾಹಶ್ವೋಗಮಿಷ್ಯಸಿ ರಾಘವಃ |
ಅಹಮಪ್ಯಾಗಮಿಷ್ಯಾಮಿ ಚಿರಾದ್ದೃಷ್ಟೋ ಮಹಾಮುನಿಃ ||೩೯||

ಅಥಪ್ರಭಾತೆ ಮುನಿನಾಸಮೇತೊ ರಾಮಸ್ಸಸೀತಸ್ಸಹ ಲಕ್ಷ್ಮಣೇನ |
ಅಗಸ್ತ್ಯಸಂಭಾಷಣಲೋಲಮಾನಸಶ್ಶನೈರಗಸ್ತ್ಯಾನುಜಮಂದಿರಂ ಯಯೌ||

|| ದ್ವಿತೀಯಸರ್ಗಸ್ಸಮಾಪ್ತಃ ||



ಪದೇಪದೇ ದೃಶ್ಯನಾಗುವೆನು. ಯಾವನು ನನಗೆ ಪ್ರಿಯವಾಗಿ ನಿನ್ನಿಂದ ಮಾಡಲ್ಪಟ್ಟ ಈ ಸ್ತೋತ್ರವನ್ನು ಸರ್ವದಾ ಪಠಿಸುವನೋ, ಅವನಿಗೆ ನನ್ನ ವಿಷಯದಲ್ಲಿ ಸಾಧುವಾದ ಭಕ್ತಿಯು ಉದಿಸಿ ಶುದ್ಧವಾದ ಜ್ಞಾನವುಂಟಾಗುವುದು ||೩೬||

ನೀನು ನನ್ನುಪಾಸನೆಯಿಂದಲೇ ಇಲ್ಲಿ ಸಮಸ್ತವಾದ ಬಂಧನದಿಂದಲೂ ಮುಕ್ತನಾಗಿದ್ದೀಯೆ. ದೇಹಪಾತವಾಗುವಲ್ಲಿ ನನ್ನಲ್ಲಿ ಐಕ್ಯವನ್ನು ಪಡೆಯುತ್ತೀಯೆ, ಇದರಲ್ಲಿ ಸಂಶಯವಿಲ್ಲ ||೩೭||

ಎಲೈ ಸುತೀಕ್ಷ್ಣಮುನಿಯೇ, ನಿನಗೆ ಗುರುವಾದ ಮುನಿಗಳಿಗೆ ಈಶ್ವರನಾದ ಅಗಸ್ತ್ಯನನ್ನು ನೋಡಲಪೇಕ್ಷಿಸುವೆನು. ಕೆಲವುಕಾಲ ಆತನು ಹೇಳಿದ ಸ್ಥಲದಲ್ಲಿ ಇರಬೇಕೆಂದು ಮನಸ್ಸು ಅತ್ಯಂತವಾಗಿ ತ್ವರೆಪಡುತಲಿದೆ ||೩೮||

ಎಂದು ರಾಮನು ಹೇಳಲು ಸುತೀಕ್ಷ್ಣಮುನಿಯು ಎಲೈ ಶ್ರೀರಾಮನೇ ಹಾಗೇ ಆಗಲಿ, ನಾಳೇದಿನ ಹೋಗುವೆಯಂತೆ, ಆ ಮಹಾಮುನಿಯು ಬಹುದಿನದಲ್ಲಿ ಕಾಣಲ್ಪಟ್ಟನಾದುದರಿಂದ ನಾನೂ ಬರುವೆನೆಂದು ಹೇಳಿದನು ||೩೯||

ಬಳಿಕ ಬೆಳಗಾಗಲು ಅಗಸ್ತ್ಯಮುನಿಯೊಡನೆ ಮಾತನಾಡಲಾಸಕ್ತವಾದ ಮನಸ್ಸುಳ್ಳ ಶ್ರೀರಾಮನು ಸುತೀಕ್ಷ್ಣಮುನಿಯೊಡನೆ ಸೀತಾಸಹಿತನಾಗಿ ಲಕ್ಷ್ಮಣನೊಡಗೂಡಿ ಮೆಲ್ಲನೆ ಅಗಸ್ತ್ಯಭ್ರಾತೃವಿನ ಮನೆಯನ್ನು ಕುರಿತು ಹೊರಟನು ||೪೦||

|| ಎರಡನೇ ಸರ್ಗವು ಮುಗಿದುದು ||



# ತೃತೀಯಸ್ಸರ್ಗಃ.

ಶ್ರೀ ಮಹಾದೇವಃ ||

ಅಥ ರಾಮಸ್ಸುತೀಕ್ಷ್ಣೇನ ಜಾನಕ್ಯಾ ಲಕ್ಷ್ಮಣೇನಚ |
ಅಗಸ್ತ್ಯಸ್ಯಾನುಜವನಂ ಮಧ್ಯಾಹ್ನೆ ಸಮುಪದ್ಯತ ||೧||

ತೇನ ಸಂಪೂಜಿತಸ್ಸಮ್ಯಗ್ಭುಕ್ತ್ವಾ ಮೂಲಫಲಾದಿಕಂ |
ಪರೇದ್ಯುಃ ಪ್ರಾತರುತ್ಥಾಯ ಜಗ್ಮುಸ್ತೇಗಸ್ತ್ಯಮಂಡಲಂ ||೨||

ಸರ್ವರ್ತುಫಲಪುಷ್ಪಾಢ್ಯಂ ನಾನಾಮೃಗಗಣೈರ್ಯುತಂ |
ಪಕ್ಷಿಸಂಘೈಶ್ಚ ವಿವಿಧೈರ್ನಾದಿತಂ ನಂದನೋಪಮಂ ||೩||

ಬ್ರಹ್ಮರ್ಷಿಭಿರ್ದೇವರ್ಷಿಭಿಸ್ಸೇವಿತಂ ಮುನಿಮಂದಿರೈಃ |
ಸರ್ವತೋಲಂಕೃತಂ ಸಾಕ್ಷಾದ್ಬ್ರಹ್ಮಲೋಕಮಿವಾಪರಂ ||೪||

---

ಶ್ರೀ ಪರಮೇಶ್ವರನು ಪಾರ್ವತಿಯನ್ನು ಕುರಿತು ಹೇಳುವನು ||

ಬಳಿಕ ಶ್ರೀರಾಮನು ಸುತೀಕ್ಷ್ಣನಿಂದಲೂ, ಸೀತೆಯಿಂದಲೂ, ಲಕ್ಷ್ಮಣನಿಂದಲೂ ಕೂಡಿ ಮಧ್ಯಾಹ್ನಕಾಲದಲ್ಲಿ ಅಗಸ್ತ್ಯಮುನಿಯು ತಮ್ಮನ ಮನೆಯನ್ನು ಸೇರಿದನು ||೧||

ಅಗ್ನಿಜಿಹ್ವನೆಂಬ ಹೆಸರುಳ್ಳ ಆ ಅಗಸ್ತ್ಯಭ್ರಾತೃವಿನಿಂದ ಚನ್ನಾಗಿ ಪೂಜಿಸಲ್ಪಟ್ಟ ಶ್ರೀರಾಮನು ಸಮಿಾಚೀನವಾದ ಫಲಮೂಲಾದಿಗಳನ್ನು ಭುಂಜಿಸಿ ಅದಿನ ಅಲ್ಲೇ ಇದ್ದನು. ಎರಡನೇ ದಿನ ಬೆಳಗ್ಗೆ ಎದ್ದು ಶ್ರೀರಾಮಾದಿಗಳಾದವರೆಲ್ಲರೂ ಅಗಸ್ತ್ಯಮುನಿಯ ಆಶ್ರಮಕ್ಕೆ ಹೋದರು ||೨||

ಸಮಸ್ತವಾದ ಋತುಗಳ ಫಲಪುಷ್ಪಗಳಿಂದ ಪೂರ್ಣವಾಗಿಯೂ, ಬಗೆಬಗೆಯಾದ ಮೃಗದ ಗುಂಪುಗಳಿಂದ ಕೂಡಿಯೂ, ನಾನಾವಿಧ ಪಕ್ಷಿಸಮೂಹದಿಂದ ಶಬ್ದಯುಕ್ತವಾಗಿಯೂ, ನಂದನವನಕ್ಕೆ ಸಮವಾಗಿಯೂ ||೩||

ಬ್ರಹ್ಮರ್ಷಿಗಳಿಂದಲೂ, ದೇವರ್ಷಿಗಳಿಂದಲೂ ಸೇವಿತವಾಗಿಯೂ, ಮುನಿಗಳ

ಬಹಿರೇವಾಶ್ರಮಸ್ಯಾಥ ಸ್ಥಿತ್ವಾ ರಾಮೋಽಬ್ರವೀನ್ಮುನಿಂ ।
ಸುತೀಕ್ಷ್ಣ ಗಚ್ಛ ತ್ವಂ ಶೀಘ್ರಮಾಗತಂ ಮಾಂ ನಿವೇದಯ ।
ಅಗಸ್ತ್ಯಮುನಿವರ್ಯಾಯ ಸೀತಯಾ ಲಕ್ಷ್ಮಣೇನ ಚ ॥೫॥

ಮಹಾಪ್ರಸಾದ ಇತ್ಯುಕ್ತ್ವಾ ಸುತೀಕ್ಷ್ಣಃ ಪ್ರಯಯೌ ಗುರೋಃ ।
ಆಶ್ರಮಂ ತ್ವರಯಾ ತತ್ರ ಋಷಿಸಂಘಸಮಾವೃತಂ ॥೬॥

ಉಪವಿಷ್ಟಂ ರಾಮಭಕ್ತೈರ್ವಿಶೇಷೇಣ ಸಮಾಯುತಂ ।
ವ್ಯಾಖ್ಯಾತ ರಾಮಮಂತ್ರಾರ್ಥಂ ಶಿಷ್ಯೇಭ್ಯಶ್ಚಾತಿ ಭಕ್ತಿತಃ ॥೭॥

ದೃಷ್ಟ್ವಾಗಸ್ತ್ಯಂ ಮುನಿಶ್ರೇಷ್ಠಂ ಸುತೀಕ್ಷ್ಣಃ ಪ್ರಯಯೌ ಮುನೇಃ ।
ದಂಡವತ್ಪ್ರಣಿಪತ್ಯಾಹ ವಿನಯಾವನತಸ್ಸುಧೀಃ ॥೮॥

ರಾಮೋ ದಾಶರಥಿರ್ಬ್ರಹ್ಮನ್ ಸೀತಯಾ ಲಕ್ಷ್ಮಣೇನಚ ।
ಆಗತೋ ದರ್ಶನಾರ್ಥಂ ತೇ ಬಹಿಸ್ತಿಷ್ಠತಿ ಸಾಂಜಲಿಃ ॥೯॥

---

ಮನೆಯಿಂದ ಎಲ್ಲಾ ಕಡೆಯಲ್ಲೂ ಅಲಂಕರಿಸಲ್ಪಟ್ಟದ್ದಾಗಿಯೂ ಪ್ರತ್ಯಕ್ಷವಾಗಿ ಎರಡನೇ ಬ್ರಹ್ಮಲೋಕದಂತಿರುವ ಅಗಸ್ತ್ಯಾಶ್ರಮವನ್ನು ಸೇರಿದರು ॥೪॥

ಬಳಿಕ ಶ್ರೀರಾಮನು ಆಶ್ರಮದ ಹೊರಗೇ ನಿಂತು ಸುತೀಕ್ಷ್ಣಮುನಿಗೆ ಈ ರೀತಿ ಹೇಳಿದನು. ಎಲೈ ಸುತೀಕ್ಷ್ಣನೇ ನೀನು ಜಾಗ್ರತೆಯಾಗಿ ಹೋಗಿ ಅಗಸ್ತ್ಯ ಮಹಾಮುನಿಗೆ ಸೀತೆಯಿಂದಲೂ, ಲಕ್ಷ್ಮಣನಿಂದಲೂ ಕೂಡಿ ನಾನು ಬಂದಿರುವುದಾಗಿ ತಿಳಿಯಪಡಿಸು ॥೫॥

ಎಂದು ಶ್ರೀರಾಮನು ಹೇಳಲು, ಸುತೀಕ್ಷ್ಣಮುನಿಯು ಮಹಾಪ್ರಸಾದವೆಂದು ಹೇಳಿ ಜಾಗ್ರತೆಯಾಗಿ ಗುರುವಿನ ಆಶ್ರಮವನ್ನು ಸೇರಿ ಅಲ್ಲಿ ಋಷಿಸಮೂಹಗಳಿಂದ ಕೂಡಿದವನಾಗಿ ॥೬॥

ವಿಶೇಷವಾಗಿ ರಾಮಭಕ್ತರಿಂದ ಕೂಡಿ ಶಿಷ್ಯರಿಗೆ ಅತಿ ಭಕ್ತಿಯಿಂದ ಶ್ರೀರಾಮಮಂತ್ರದ ಅರ್ಥವನ್ನು ವಿವರಿಸುತ್ತಿರುವ ॥೭॥

ಮುನಿಶ್ರೇಷ್ಠನಾದ ಅಗಸ್ತ್ಯನನ್ನು ಕಂಡು ವಿನಯದಿಂದ ತಗ್ಗಿದವನಾಗಿ ಆ ಮಹಾಮುನಿಯ ಸನ್ನಿಧಿಯನ್ನು ಸೇರಿ ದಂಡದಂತೆ ನಮಸ್ಕರಿಸಿ ಈ ರೀತಿ ಹೇಳಿದನು ॥೮॥

ಎಲೈ ಬ್ರಹ್ಮಜ್ಞಾನಿಗಳೊಳಗೆ ಶ್ರೇಷ್ಠನೇ, ದಶರಥಪುತ್ರನಾದ ಶ್ರೀರಾಮನು

ಅಗಸ್ತ್ಯಃ ||

ಶೀಘ್ರಮಾನಯ ಭದ್ರಂ ತೇ ರಾಮಂ ಮಮ ಹೃದಿ ಸ್ಥಿತಂ |
ತಮೇವ ಧ್ಯಾಯಮಾನೋಽಹಂ ಕಾಂಕ್ಷಮಾಣೋಽತ್ರಸಂಸ್ಥಿತಃ ||೧೦||

ಇತ್ಯುಕ್ತ್ವಾ ಸ್ವಯಮುತ್ಥಾಯ ಮುನಿಭಿಸ್ಸಹಿತೋ ದ್ರುತಂ |
ಅಭ್ಯಯಾತ್ಪರಯಾ ಭಕ್ತ್ಯಾ ಗತ್ವಾ ರಾಮಮಥಾಬ್ರವೀತ್ ||೧೧||

ಆಗಚ್ಛ ರಾಮ ಭದ್ರಂ ತೇ ದಿಷ್ಟ್ಯಾ ತೇಽದ್ಯ ಸಮಾಗಮಃ |
ಪ್ರಿಯಾತಿಥಿರ್ಮಮ ಪ್ರಾಪ್ತೋಽಸ್ಯದ್ಯ ಮೇ ಸಫಲಂ ದಿನಂ ||೧೨||

ರಾಮೋಽಪಿ ಮುನಿಮಾಯಾಂತಂ ದೃಷ್ಟ್ವಾ ಹರ್ಷಸಮಾಕುಲಃ |
ಸೀತಯಾ ಲಕ್ಷ್ಮಣೇನಾಪಿ ದಂಡವತ್ಪತಿತೋ ಭುವಿ ||೧೩||

ದ್ರುತಮುತ್ಥಾಪ್ಯ ಮುನಿರಾಡ್ರಾಮಮಾಲಿಂಗ್ಯ ಭಕ್ತಿತಃ |
ತದ್ಗಾತ್ರಸ್ಪರ್ಶಜಾಹ್ಲಾದ ಸ್ರವನ್ನೇತ್ರಜಲಾಕುಲಃ ||೧೪||

---

ಸೀತೆಯಿಂದಲೂ ಲಕ್ಷ್ಮಣನಿಂದಲೂ ಕೂಡಿ ನಿನ್ನ ದರ್ಶನಕ್ಕೋಸ್ಕರ ಬಂದು ಹೊರಗೆ ನಿಂತಿರುವನು ||೯||

ಎಂದು ಹೇಳಲು, ಅಗಸ್ತ್ಯನು ಎಲೈ ಸುತೀಕ್ಷ್ಣನೇ, ನಿನಗೆ ಶುಭವಾಗಲಿ, ನನ್ನ ಹೃದಯದಲ್ಲೂ ಇದ್ದುಕೊಂಡು ಹೊರಗೆ ನಿಂತಿರುವ ಶ್ರೀರಾಮನನ್ನು ಕರೆದುಕೊಂಡುಬಾ. ಇಲ್ಲಿ ನಾನವನ ದರ್ಶನವನ್ನು ಅಪೇಕ್ಷಿಸುವೆನಾದಕಾರಣ ಅವನನ್ನೇ ಧ್ಯಾನಿಸುತ್ತಿರುವೆನು ||೧೦||

ಎಂದು ಹೇಳಿ ಜಾಗ್ರತೆಯಾಗಿ ಮುನಿಗಳಿಂದ ಕೂಡಿ ತಾನೇ ಎದುರುಗೊಂಡು ಹೋದನು ಬಳಿಕ ರಾಮನ ಸಮೀಪವನ್ನು ಸೇರಿ ಈರೀತಿಯಾಗಿ ಹೇಳಿದನು ||೧೧||

ಎಲೈ ಶ್ರೀರಾಮನೇ, ನಿನಗೆ ಶುಭವಾಗಲಿ ನನ್ನ ಪುಣ್ಯವಿಶೇಷದಿಂದ ಈಗ ಸೇರೋಣವಾಯಿತು, ನಿರತಿಶಯ ಪ್ರೇಮಪಾತ್ರನಾದ ಅತಿಥಿಯು ನೀನು ಪ್ರಾಪ್ತನಾಗಿದ್ದೀಯೆ. ಈಗ ಈದಿನವು ಫಲವಾಯಿತು ||೧೨||

ಎಂದು ಅಗಸ್ತ್ಯನು ಹೇಳಲು ಬರುತ್ತಿರುವ ಆ ಮುನಿಯನ್ನು ಕಂಡು ಶ್ರೀರಾಮನು ಸಂತೋಷದಿಂದ ಸೀತೆಯಿಂದಲೂ, ಲಕ್ಷ್ಮಣನಿಂದಲೂ ಕೂಡಿ ದಂಡದಂತೆ ನಮಿಸಿದನು ||೧೩||

ಆ ಮುನಿರಾಜನು ಶೀಘ್ರವಾಗಿ ಶ್ರೀರಾಮನನ್ನೆತ್ತಿ ಭಕ್ತಿಯಿಂದಾಲಂಗಿಸಿ, ಆತನ ಶರೀರಸ್ಪರ್ಶದಿಂದುಂಟಾದ ಆನಂದಬಾಷ್ಪಗಳಿಂದ ಕೂಡಿದವನಾಗಿ ||೧೪||

ಗೃಹೀತ್ವಾ ಕರಮೇಕೇನ ಕರೇಣ ರಘುನಂದನಂ ।
ಜಗಾಮ ಸ್ವಾಶ್ರಮಂ ಹೃಷ್ಟೊ ಮನಸಾ ಮುನಿಪುಂಗವಃ ॥೧೫॥

ಸುಖೋಪವಿಷ್ಟಂ ಸಂಪೂಜ್ಯ ಪೂಜಯಾ ಬಹುವಿಸ್ತರಂ ।
ಭೋಜಯಿತ್ವಾ ಯಥಾನ್ಯಾಯಂ ಭೋಜ್ಯೈರ್ವನ್ಯೈರನೇಕಥಾ ॥೧೬॥

ಸುಖೋಪವಿಷ್ಟಮೇಕಾಂತೆ ರಾಮಂ ಶಶಿನಿಭಾನನಂ ।
ಕೃತಾಂಜಲಿರುವಾಚೇದ ಮಗಸ್ತ್ಯೊ ಭಗವಾನ್ ಋಷಿಃ ॥೧೭॥

ತ್ವದಾಗಮನಮೇವಾಹಂ ಪ್ರತೀಕ್ಷನ್ ಸಮವಸ್ಥಿತಃ ।
ಯದಾ ಕ್ಷೀರಸಮುದ್ರಾಂತೆ ಬ್ರಹ್ಮಣಾ ಪ್ರಾರ್ಥಿತಃ ಪುರಾ ।
ಭೂಮೇರ್ಭಾರಾಪನುತ್ಯರ್ಥಂ ರಾವಣಸ್ಯ ವಧಾಯ ಚ ॥೧೮॥

ತದಾದಿ ದರ್ಶನಾಕಾಂಕ್ಷೀ ತವ ರಾಮ ತಪಶ್ಚರನ್ ।
ವಸಾಮಿ ಮುನಿಭಿಸ್ಸಾರ್ಧಂ ತ್ವಾಮೇವ ಪರಿಚಿಂತಯನ್ ॥೧೯॥

---

ಒಂದು ಹಸ್ತದಿಂದ ಆತನ ಕೈಯನ್ನು ಹಿಡಿದು ಸಂತುಷ್ಟವಾದ ಮನದಿಂದ ಆ ಮುನಿಶ್ರೇಷ್ಠನು ರಾಮನನ್ನು ಕರೆದುಕೊಂಡು ಆಶ್ರಮವನ್ನು ಸೇರಿದನು ॥೧೫॥

ಸುಖವಾಗಿ ಕುಳಿತಿರುವ ಶ್ರೀರಾಮನನ್ನು ಬಹುವಿಸ್ತಾರವಾಗಿ ಚನ್ನಾಗಿ ಪೂಜಿಸಿ, ಅನೇಕ ಪ್ರಕಾರವಾದ ಭೋಜ್ಯಗಳಿಂದಲೂ, ಪಾನೀಯಾದಿಗಳಿಂದಲೂ ನ್ಯಾಯಾನುಸಾರವಾಗಿ ಭೋಜನವನ್ನು ಮಾಡಿಸಿ ॥೧೬॥

ಏಕಾಂತದಲ್ಲಿ ಸುಖವಾಗಿ ಕುಳಿತಿರುವ ಚಂದ್ರನಂತೆ ಸುಂದರವಾದ ಮುಖವುಳ್ಳ ಶ್ರೀರಾಮನನ್ನು ಕುರಿತು ಭಗವಂತನಾದ ಅಗಸ್ತ್ಯಋಷಿಯು ಕೃತಾಂಜಲಿಯಾಗಿ ಇಂತು ಹೇಳಿದನು ॥೧೭॥

ಭೂಮಿಯ ಭಾರವನ್ನು ಇಳುಹಲೋಸುಗವೂ ರಾವಣನ ಸಂಹಾರಕ್ಕೋಸ್ಕರವೂ, ಪೂರ್ವದಲ್ಲಿ ಕ್ಷೀರಸಮುದ್ರದೊಳಗೆ ಯಾವಾಗ ನೀನು ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟಿಯೋ ಅದು ಮೊದಲುಗೊಂಡು ನಿನ್ನ ಸೇರುವಿಕೆಯನ್ನೇ ನಾನು ಕಾದುಕೊಂಡಿದ್ದೆನು ॥೧೮॥

ಮತ್ತು ಅದು ಮೊದಲುಗೊಂಡು ಎಲೈ ಶ್ರೀರಾಮನೇ, ನಿನ್ನ ದರ್ಶನವನ್ನು ಅಪೇಕ್ಷಿಸುವೆನಾದಕಾರಣ ನಿನ್ನನ್ನು ಕುರಿತು ತಪಸ್ಸನ್ನು ಮಾಡುತ್ತಲೂ, ನಿನ್ನನ್ನೇ ಧ್ಯಾನಿಸುತ್ತಲೂ ಮುನಿಗಳೊಡನೆ ಇಲ್ಲಿರುವೆನು ॥೧೯॥

ಸೃಷ್ಟೇಃ ಪ್ರಾಗೇಕ ಏವಾಸೀರ್ನಿರ್ವಿಕಲ್ಪೋಽನುಪಾಧಿಕಃ |
ತ್ವದಾಶ್ರಯಾ ತ್ವದ್ವಿಷಯಾ ಮಾಯಾ ತೇ ಶಕ್ತಿರುಚ್ಯತೇ ||೨೦||

ತ್ವಾಮೇವ ನಿರ್ಗುಣಂ ಶಕ್ತಿರಾವೃಣೋತಿ ಯದಾ ತದಾ |
ಅವ್ಯಾಕೃತಮಿತಿ ಪ್ರಾಹುರ್ವೇದಾಂತಪರಿನಿಷ್ಠಿತಾಃ ||೨೧||

ಮೂಲಪ್ರಕೃತಿರಿತ್ಯೇಕೇ ಪ್ರಾಹುರ್ಮಾಯೇತಿ ಕೇಚನ |
ಅವಿದ್ಯಾ ಸಂಸೃತಿರ್ಬಂಧ ಇತ್ಯಾದಿ ಬಹುಧೋಚ್ಯತೇ ||೨೨||

ತ್ವಯಾ ಸಂಕ್ಷೋಭ್ಯಮಾಣಾ ಸಾ ಮಹತ್ತತ್ವಂ ಪ್ರಸೂಯತೇ |
ಮಹತ್ತತ್ವಾದಹಂಕಾರಸ್ತ್ವಯಾ ಸಂಚೋದಿತಾದಭೂತ್ ||೨೩||

---

ಎಂದು ಹೇಳಿ ಸೃಷ್ಟ್ಯಾದಿಕ್ರಮದಿಂದ ಸ್ತುತಿಸುವನದೆಂತೆನೆ — ಎಲೈ ಸ್ವಾಮಿಯೇ! ನೀನು ಸೃಷ್ಟಿಗೆ ಪೂರ್ವದಲ್ಲಿ ಉಪಾಧಿಇಲ್ಲದವನಾದಕಾರಣ ಯಾವ ಭೇದವೂ ಇಲ್ಲದವನಾಗಿ ಅದ್ವಿತೀಯನಾಗಿಯೇ ಇದ್ದೆ ||೨೦||

ಹೀಗೆ ನಿರ್ಗುಣವಾಗಿಯೇ ಇರುವ ನಿನ್ನನ್ನು ಯಾವಾಗ ಆ ಶಕ್ತಿಯು ಆವರಿಸುವುದೋ ಆಗ ನಿನ್ನ ಸಂಬಂಧದಿಂದ ಅದನ್ನು ವೇದಾಂತದಲ್ಲಿ ಪಂಡಿತರಾದವರು ವ್ಯಾಕೃತವೆಂದು ಹೇಳುವರು. ಬೀಜದಲ್ಲಿ ವೃಕ್ಷವು ಶಾಖಪತ್ರಾದಿ ವಿಭಾಗವಿಲ್ಲದೇ ಇರುವಂತೆ ಪ್ರಪಂಚವು ಯಾವುದರಲ್ಲಿರುವುದೋ ಅದಕ್ಕೆ ಅವ್ಯಾಕೃತವೆಂಬ ಹೆಸರ ||

ಇದನ್ನು ಮೂಲಪ್ರಕೃತಿಯೆಂದು ಸಾಂಖ್ಯರೂ, ಮಾಯೆಯೆಂದು ಕೆಲವು ವೇದಾಂತಿಗಳೂ, ಅವಿದ್ಯೆಯೆಂದು ಯೋಗಿಗಳೂ, ಸಂಸಾರವೆಂತಲೂ ಬಂಧವೆಂತಲೂ ಕೆಲಕೆಲರು ಮತಭೇದದಿಂದ ಹೇಳುವರು. ಇದೇ ಮೊದಲಾದ ನಾಮಧೇಯವು ಇದಕ್ಕೆ ಅನೇಕಪ್ರಕಾರವಾಗಿ ಹೇಳಲ್ಪಡುವುದು. ಪ್ರಪಂಚಕ್ಕೆ ಇದು ಆದಿಕಾರಣವಾದುದರಿಂದ ಮೂಲಪ್ರಕೃತಿಯೆಂದಿದಕ್ಕೆ ನಾಮವು ಸರಿಯೆನಿಸುವುದು. ವ್ಯವಹಾರದಿಂದ ತತ್ವಜ್ಞಾನವಾಗುವಲ್ಲಿ ಇದು ಅಣಗಿಹೋಗುವುದರಿಂದ ಮಾಯೆಯೆಂತಲೂ, ಅವಿದ್ಯೆಯೆಂತಲೂ ಹೆಸರು ಸರಿಯೆನಿಸುವುದು. ಸಂಸಾರಬಂಧವೆಂಬ ಎರಡು ನಾಮಗಳು ಅವುಗಳಿಗೆ ಕಾರಣವಾಗುವುದರಿಂದ ಬಂದಿರುವವು ||೨೨||

ನಿನ್ನಿಂದ ಕ್ಷೋಭೆಪಡಿಸಲ್ಪಟ್ಟ ಮೂಲಪ್ರಕೃತಿಯು ಮಹತ್ತೆನಿಸುವ ಬುದ್ಧಿಯೆಂಬ ತತ್ವವನ್ನು ಪ್ರಸವಿಸಿತು. ನಿನ್ನಿಂದ ಪ್ರೇರಿತವಾದ ಮಹತ್ತತ್ವದಿಂದ ಅಹಂಕಾರವು ಉದಿಸಿತು ||೨೩||

ಅಹಂಕಾರೋ ಮಹತ್ತತ್ತ್ವಸಂವೃತಸ್ತ್ರಿವಿಧೋಽಭವತ್ |
ಸಾತ್ತ್ವಿಕೋ ರಾಜಸಶ್ಚೈವ ತಾಮಸಶ್ಚೇತಿ ಭಣ್ಯತೇ ||೨೪||

ತಾಮಸಾತ್ಸೂಕ್ಷ್ಮತನ್ಮಾತ್ರಾಣ್ಯಾಸನ್ಭೂತಾನ್ಯತಃಪರಂ |
ಸ್ಥೂಲಾನಿ ಕ್ರಮಶೋ ರಾಮ ಕ್ರಮೋತ್ತರಗುಣಾನಿ ಚ ||೨೫||

ರಾಜಸಾನೀಂದ್ರಿಯಾಣ್ಯೇವ ಸಾತ್ತ್ವಿಕಾ ದೇವತಾ ಮನಃ |
ತೇಭ್ಯೋಽಭವತ್ಸೂತ್ರರೂಪಂ ಲಿಂಗಂ ಸರ್ವಗತಂ ಮಹತ್ ||೨೬||

ತತೋ ವಿರಾಟ್ಸಮುತ್ಪನ್ನಃ ಸ್ಥೂಲಾದ್ಭೂತಕದಂಬಕಾತ್ |
ವಿರಾಜಃ ಪುರುಷಾತ್ಸರ್ವಂ ಜಗತ್ಸ್ಥಾವರಜಂಗಮಂ ||೨೭||

ದೇವತಿರ್ಯಙ್ಮನುಷ್ಯಾಶ್ಚ ಕಾಲಕರ್ಮಕ್ರಮೇಣ ತು |
ತ್ವಂ ರಜೋಗುಣತೋ ಬ್ರಹ್ಮಾ ಜಗತಃಸರ್ಗಕಾರಣಂ ||೨೮||

---

ಮಹತ್ತತ್ತ್ವದಿಂದ ವ್ಯಾಪ್ತವಾದ ಅಹಂಕಾರವು ಮೂರುಬಗೆಯಾದುದು. ಅದು ಸಾತ್ತ್ವಿಕವೆಂತಲೂ, ರಾಜಸವೆಂತಲೂ, ತಾಮಸವೆಂತಲೂ ಹೇಳಲ್ಪಡುವುದು ||

ಆ ತಾಮಸವು ಗುಣಮಾತ್ರಸ್ವರೂಪವಾದುದರಿಂದ ಸೂಕ್ಷ್ಮವಾದ ಶಬ್ದಾದಿ ಪಂಚತನ್ಮಾತ್ರಗಳಾದುವು. ಎಲೈ ರಾಮನೇ! ಅವುಗಳಿಂದ ಕ್ರಮವಾಗಿ ಏಕೋತ್ತರವಾದ ಗುಣವುಳ್ಳ ಆಕಾಶಾದಿ ಮಹಾಭೂತಗಳಾದುವು ||೨೫||

ರಾಜಸಾಹಂಕಾರದಿಂದುಂಟಾದುದರಿಂದ ಇಂದ್ರಿಯಗಳು ಪ್ರಾಣಗಳು ಸಹ ರಾಜಸಗಳೇ, ಹೀಗೆ ಅಭಿಮಾನಿದೇವತೆಗಳು ಅಂತಃಕರಣವು ಸಹ ಸಾತ್ತ್ವಿಕವು ಇವುಗಳಿಂದ ಬಾಹ್ಯವಿಷಯ ಸಂಯೋಜಕವಾದುದರಿಂದ ಸೂತ್ರರೂಪವಾಗಿ ಸರ್ವಪ್ರಾಣಿಗಳಲ್ಲೂ ಇರುವುದಾದಕಾರಣ ಮಹತ್ತಾಗಿ ಲಿಂಗವೆನಿಸುವ ಬುದ್ಧಿಯೇ ಪ್ರಧಾನವಾಗಿರುವುದರಿಂದ ಲಿಂಗನಾಮಕವಾದ ಶರೀರವಾದುದು ||೨೬||

ಆಕಾಶಾದಿಯಾಗಿ ಸ್ಥೂಲವಾದ ಮಹಾಭೂತಗಳ ಸಮೂಹದಿಂದ ಜಗದ್ರೂಪನಾದ ವಿರಾಟ್ಪುರುಷನು ಹುಟ್ಟಿದನು. ಆ ವಿರಾಟ್ಪುರುಷನ ದೆಸೆಯಿಂದ ಸ್ಥಾವರ ಜಂಗಮಾತ್ಮಕವಾದ ಜಗತ್ತು ಉಂಟಾಯಿತು ||೨೭||

ಕಾಲಕರ್ಮಕ್ರಮದಿಂದ ದೇವಜಾತಿ, ತಿರ್ಯಗ್ಜಾತಿ, ಮನುಷ್ಯಜಾತಿಗಳಾದ ಸರ್ವಪ್ರಾಣಿಗಳೂ ಜಗತ್ತಿನಲ್ಲಿ ಹುಟ್ಟುವುದು. ನೀನು ರಜೋಗುಣದಿಂದ ಜಗತ್ತಿನ ಸೃಷ್ಟಿಗೆ ಕಾರಣನಾದ ಬ್ರಹ್ಮನು ||೨೮||

ಸತ್ತ್ವಾದ್ವಿಷ್ಣುಸ್ತ್ವಮೇವಾಸ್ಯ ಪಾಲಕಸ್ಸದ್ಭಿರುಚ್ಯತೇ |
ಲಯೇ ರುದ್ರಸ್ತ್ವಮೇವಾಸ್ಯ ತ್ವನ್ಮಾಯಾಗುಣಭೇದತಃ ||೨೯||

ಜಾಗ್ರತ್ಸ್ವಪ್ನಸುಷುಪ್ತ್ಯಾಖ್ಯಾ ವೃತ್ತಯೋ ಬುದ್ಧಿಜೈರ್ಗುಣೈಃ |
ತಾಸಾಂ ವಿಲಕ್ಷಣೋ ರಾಮಸ್ತ್ವಂ ಸಾಕ್ಷೀ ಚಿನ್ಮಯೋಽವ್ಯಯಃ ||೩೦||

ಸೃಷ್ಟಿಲೀಲಾಂ ಯದಾ ಕರ್ತುಮೀಹಸೇ ರಘುನಂದನ |
ಅಂಗೀಕರೋಷಿ ಮಾಯಾಂ ತ್ವಂ ತದಾ ವೈ ಗುಣವಾನಿವ ||೩೧||

ರಾಮ ಮಾಯಾ ದ್ವಿಧಾ ಭಾತಿ ವಿದ್ಯಾವಿದ್ಯೇತಿ ತೇ ಸದಾ |
ಪ್ರವೃತ್ತಿಮಾರ್ಗನಿರತಾ ಅವಿದ್ಯಾವಶವರ್ತಿನಃ |
ನಿವೃತ್ತಿಮಾರ್ಗನಿರತಾ ವೇದಾಂತಾರ್ಥವಿಚಾರಕಾಃ ||೩೨||

---

ಸತ್ವಗುಣದಿಂದ ನೀನೇ ಈ ಜಗತ್ತಿಗೆ ಪಾಲಕನಾದ ವಿಷ್ಣುವೆಂದು ಸಜ್ಜನರಿಂದ ಹೇಳಲ್ಪಡುತ್ತೀಯೆ. ಈ ಜಗತ್ತಿನ ಲಯದಲ್ಲಿ ನೀನೇ ತಮೋಗುಣದಿಂದ ರುದ್ರನೆನಿಸುತ್ತೀಯೆ, ಮಾಯಾಗುಣಭೇದದಿಂದ ನೀನೊಬ್ಬನೇ ಮೂರುಬಗೆಯಾಗುತ್ತೀಯೆ||

ಯಾವಾಗ ಸೃಷ್ಟಿರೂಪವಾದ ಲೀಲೆಯನ್ನು ನೀನು ಮಾಡಲಿಚ್ಛೈಸುವೆಯೋ ಆಗ ತನ್ನ ಕಾರ್ಯವನ್ನು ಪ್ರಕಾಶಪಡಿಸಿ ನಿಜರೂಪವನ್ನು ಮರೆಸುವ ಮಾಯೆಯನ್ನು ನೀನು ಅಂಗೀಕರಿಸಿ ಗುಣವಂತನಂತೆ ಪ್ರಕಾಶಿಸುತ್ತೀಯೆ ||೩೦||

ಮಹತ್ತತ್ವದಿಂದ ಆವಿರ್ಭವಿಸಿದ ಸತ್ವರಜಸ್ತಮೋಗುಣಗಳಿಂದ ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಮೂರು ವೃತ್ತಿಗಳಾಗುವುವು, ಅವುಗಳಿಗೆ ಸಾಕ್ಷಿಯಾದ್ದರಿಂದ ಭಿನ್ನವಾಗಿ ನಾಶವಿಲ್ಲದ ಜ್ಞಾನಸ್ವರೂಪನಾದ ನೀನು, ಜ್ಞಾನವಿಹಾರಸ್ಥಾನವಾದ್ದರಿಂದ ರಾಮನೆನಿಸುತ್ತೀಯೆ ||೩೧||

ಎಲೈ ರಾಮನೇ! ನಿನ್ನ ಮಾಯೆಯು ವಿದ್ಯೆಯೆಂತಲೂ, ಅವಿದ್ಯೆಯೆಂತಲೂ ಎರಡುಬಗೆಯಾಗಿ ಸರ್ವದಾ ಪ್ರಕಾಶಿಸುವುದು, ಅದರಲ್ಲಿಯೆ ವಿದ್ಯೆಗೆ ಸ್ವಾಧೀನರಾದವರು, ನಿವೃತ್ತಿಮಾರ್ಗದಲ್ಲಿ ಆಸಕ್ತರಾದವರು, ವೇದದಲ್ಲಿ ನಿಶ್ಚಿತವಾದುದನ್ನು ಹೇಳುವುದರಿಂದ ವೇದಾಂತವೆನಿಸುವ ಶಾಸ್ತ್ರದಲ್ಲಿ ಅರ್ಥರೂಪವಾದ ನಿನ್ನ ವಿಚಾರವನ್ನು ಮಾಡುವರು ||೩೨||

ತ್ವದ್ಭಕ್ತಿನಿರತಾ ಯೇ ಚ ತೇ ವೈ ವಿದ್ಯಾಮಯಾಸ್ಸ್ಮೃತಾಃ |
ಅವಿದ್ಯಾವಶಗಾ ಯೇ ತು ನಿತ್ಯಂ ಸಂಸಾರಿಣಶ್ಚ ತೇ |
ವಿದ್ಯಾಭ್ಯಾಸರತಾ ಯೇ ತು ನಿತ್ಯಮುಕ್ತಾಸ್ತ ಏವ ಹಿ ||೩೩||

ಲೋಕೇ ತ್ವದ್ಭಕ್ತಿನಿರತಾಸ್ತ್ವನ್ಮಂತ್ರೋಪಾಸಕಾಶ್ಚ ಯೇ |
ವಿದ್ಯಾ ಪ್ರಾದುರ್ಭವೇತ್ತೇಷಾಂ ನೇತರೇಷಾಂ ಕದಾಚನ ||೩೪||

ಅತಸ್ತ್ವದ್ಭಕ್ತಿಸಂಪನ್ನಾ ಮುಕ್ತಾ ಏವ ನ ಸಂಶಯಃ |
ತ್ವದ್ಭಕ್ತ್ಯಮೃತಹೀನಾನಾಂ ಮೋಕ್ಷಸ್ಸ್ವಪ್ನೇಪಿ ನೊ ಭವೇತ್ ||೩೫||

ಕಿಂ ರಾಮ ಬಹುನೋಕ್ತೇನ ಸಾರಂ ಕಿಂಚಿದ್ಬ್ರವೀಮಿ ತೇ |
ಸಾಧುಸಂಗತಿರೇವಾತ್ರ ಮೋಕ್ಷಹೇತುರುದಾಹೃತಾ ||೩೬||

---

ನಿನ್ನ ಭಕ್ತಿಯಲ್ಲಿ ಆಸಕ್ತರಾದವರು ಯಾರೋ ಅವರು ವಿದ್ಯಾಮಯರೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವುದು. ಅವಿದ್ಯೆಗಧೀನರಾದವರು ಯಾರೋ ಅವರು ಕರ್ಮಮಾರ್ಗದಲ್ಲಿರುವುದರಿಂದ ನರಕಸ್ವರ್ಗಗಳಲ್ಲಿ ಅಲೆಯುತ್ತಾ ಸರ್ವದಾ ಸಂಸಾರಿಗಳೆನಿಸುವರು. ಯಾರು ವಿದ್ಯೆಯ ಅಭ್ಯಾಸದಲ್ಲಿ ಆಸಕ್ತರಾಗುವರೋ ಅವರೇ ನಿತ್ಯಮುಕ್ತರೆನಿಸುವರು. (ತದಾ ರಾಮೋಽಹಮಿತ್ಯೇಕ ತತ್ವತಃ ಪ್ರವದಂತಿಯೆ | ನತೇ ಸಂಸಾರಿಣೋ ನೂನಂ ರಾಮ ಏವ ನಸಂಶಯಃ) ಎಂದು ಶ್ರುತಿ ಇರುವುದರಿಂದ ಚಿನ್ಮಾತ್ರಜ್ಞಾನವೇ ವಿದ್ಯೆಯು. ಜಡಾತ್ಮಜ್ಞಾನವೇ ಅವಿದ್ಯೆಯೆಂದು ತಿಳಿವುದು ||

ನಿನ್ನ ಭಕ್ತಿಯಲ್ಲಿ ಆಸಕ್ತರಾಗಿ ನಿನ್ನ ಮಂತ್ರದ ಉಪಾಸನೆಯನ್ನು ಯಾರು ಮಾಡುವರೋ ವಿದ್ಯೆಯು ಅವರಿಗೇ ಉಂಟಾಗುವುದಲ್ಲದೆ ಇತರರಿಗೆ ಎಂದಿಗೂ ಆಗಲಾರದು ||೩೪||

ಆದುದರಿಂದ ನಿನ್ನ ಭಕ್ತಿಯಿಂದ ಕೂಡಿದವರು ಭಕ್ತರೇ, ಇದರಲ್ಲಿ ಸಂಶಯವಿಲ್ಲ. ಅಮೃತರೂಪವಾದ ನಿನ್ನ ಭಕ್ತಿಯಿಲ್ಲದವರಿಗೆ ಮೋಕ್ಷವೆನ್ನುವುದು ಸ್ವಪ್ನದಲ್ಲೂ ಲಭಿಸಲಾರದು. ಸ್ವರೂಪಾವಸ್ಥಿತಿರ್ಮುಕ್ತಿಸ್ತದ್ಭ್ರಂಶೋಽಹಂತ್ವವೇದನ ಎಂಬ ಶ್ರುತಿವಚನವನ್ನಿಲ್ಲಿ ಪ್ರಮಾಣವನ್ನಾಗಿ ಗ್ರಹಿಸುವುದು ||೩೫||

ಎಲೈ ಶ್ರೀರಾಮನೇ! ನಿನ್ನ ವಿಷಯದಲ್ಲಿ ಬಲು ಮಾತಿನಿಂದೇನು, ಸಾರಾಂಶವನ್ನು ಸ್ವಲ್ಪವಾಗಿಯೇ ಹೇಳುವೆನು. ಈ ಪ್ರಪಂಚದಲ್ಲಿ ಸಾಧುಗಳ ಸಹವಾಸವೇ ಮೋಕ್ಷಕ್ಕೆ ಸಾಧನವಾಗಿ ಹೇಳಲ್ಪಡುವುದು ||೩೬||

ಸಾಧವಸ್ಸಮಚಿತ್ತಾ ಯೇ ನಿಸ್ಪೃಹಾ ವಿಗತೈಷಿಣಃ |
ದಾಂತಾಃ ಪ್ರಶಾಂತಾಸ್ತ್ವದ್ಭಕ್ತಾ ನಿವೃತ್ತಾಖಿಲಕಾಮನಾಃ ||೩೭||

ಇಷ್ಟಪ್ರಾಪ್ತಿನಿವೃತ್ತ್ಯೋಶ್ಚ ಸಮಾಸ್ಸಂಗವಿವರ್ಜಿತಾಃ |
ಸಂನ್ಯಸ್ತಾಖಿಲಕರ್ಮಾಣಸ್ಸರ್ವದಾ ಬ್ರಹ್ಮತತ್ಪರಾಃ ||೩೮||

ಯಮಾದಿಗುಣಸಂಪನ್ನಾಸ್ಸಂತುಷ್ಟಾ ಯೇನಕೇನಚಿತ್ |
ಸತ್ಸಂಗಮೋ ಭವೇದ್ಯರ್ಹಿ ತ್ವತ್ಕಥಾಶ್ರವಣೇ ರತಿಃ |
ಸಮುದೇತಿ ತತೋ ಭಕ್ತಿಸ್ತ್ವಯಿ ರಾಮ ಸನಾತನೇ ||೩೯||

ತ್ವದ್ಭಕ್ತಾವುಪಪನ್ನಾಯಾಂ ವಿಜ್ಞಾನಂ ವಿಪುಲಂ ಸ್ಫುಟಂ |
ಉದೇತಿ ಮುಕ್ತಿಮಾರ್ಗೋಽಯಮಾದ್ಯಶ್ಚತುರಸೇವಿತಃ ||೪೦||

---

ಸಾಧುಗಳು ಯಾರೆಂದರೆ—ಸರ್ವತ್ರ ಸಮವಾಗಿರುವ ಬ್ರಹ್ಮದಲ್ಲೇ ಚಿತ್ತವುಳ್ಳವರಾಗಿ, ಯಾರು ಇಲ್ಲದಿರುವುದನ್ನು ಅಪೇಕ್ಷಿಸದೇ, ಇದ್ದದ್ದರಲ್ಲೂ ಇಂದ್ರಿಯನಿಗ್ರಹವುಳ್ಳವರಾಗಿಯೂ, ನಿನಗೆ ಭಕ್ತರಾಗಿಯೂ, ನಷ್ಟವಾದ ಪರಲೋಕದ ಅಪೇಕ್ಷೆಯುಳ್ಳವರಾಗಿರುವರೋ, ಅವರು ಸಾಧುಗಳು ||೩೭||

ಮತ್ತು ಯಾರು ಇಲ್ಲದಿದ್ದ ಇಷ್ಟಾರ್ಥದ ಪ್ರಾಪ್ತಿಯಲ್ಲೂ, ಇದ್ದ ಪದಾರ್ಥದ ನಾಶದಲ್ಲೂ, ಹರ್ಷಾದಿ ವಿಕಾರವಿಲ್ಲದೆ ಸಮವಾಗಿರುವರೋ, ಯಾವುದರಲ್ಲೂ ಅಭಿಮಾನವಿಲ್ಲದಿರುವರೋ, ಕಾಮ್ಯಕರ್ಮಗಳನ್ನೂ, ನಿತ್ಯಕರ್ಮಗಳ ಫಲವನ್ನೂ ಕೂಡ ಯಾರು ಬಿಟ್ಟಿರುವರೋ, ಯಾರು ಪರಮಾತ್ಮನ ವಿಚಾರದಲ್ಲೇ ಆಸಕ್ತರಾಗಿರುವರೋ

ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯ ಪರಿಗ್ರಹ ಶೌಚ ಸಂತೋಷ ತಪಸ್ಸ್ವಾಧ್ಯಾಯ ಈಶ್ವರಾರ್ಪಣಗಳೆಂಬ ಯಮಾದಿ ಗುಣಗಳಿಂದ ಕೂಡಿದವರಾಗಿ ಈಶ್ವರೇಚ್ಛೆಯಿಂದ ಪ್ರಾಪ್ತವಾದುವರಲ್ಲೇ ಯಾರು ಸಂತುಷ್ಟರಾಗಿರುವರೋ ಅವರು ಸಾಧುಗಳು ||೩೮||

ಅವರ ಸಹವಾಸವು ಯಾವಾಗ ಆಗುವುದೋ ಆಗಲೇ ನಿನ್ನ ಕಥೆಯನ್ನು ಕೇಳುವುದರಲ್ಲಿ ಆಸಕ್ತಿಯು ಹುಟ್ಟುವುದು. ಎಲೈ ಶ್ರೀರಾಮನೇ! ಬಳಿಕ ನಿನ್ನ ಕಥೆಯನ್ನು ಶ್ರವಣದಿಂದ ನಿತ್ಯನಾದ ನಿನ್ನಲ್ಲಿ ಅತಿ ಪ್ರೇಮರೂಪವಾದ ಭಕ್ತಿಯು ಉಂಟಾಗುವುದು ||೩೯||

ಅದರಿಂದ ಸ್ವರೂಪಾನುಸಂಧಾನರೂಪವಾದ ಭಕ್ತಿಯು ಪ್ರಾಪ್ತವಾಗಲು

ತಸ್ಮಾದ್ರಾಘವ ಸದ್ಭಕ್ತಿಸ್ತ್ವಯಿ ಮೇ ಪ್ರೇಮಲಕ್ಷಣಾ |
ಸದಾ ಭೂಯಾದ್ಧರೇ ಸಂಗಸ್ತ್ವದ್ಭಕ್ತೇಷು ವಿಶೇಷತಃ ||೪೧||

ಅದ್ಯ ಮೇ ಸಫಲಂ ಜನ್ಮ ಭವತ್ಸಂದರ್ಶನಾದಭೂತ್ |
ಅದ್ಯ ಮೇ ಕ್ರತವಸ್ಸರ್ವೇ ಬಭೂವುಸ್ಸಫಲಾಃ ಪ್ರಭೋ ||೪೨||

ದೀರ್ಘಕಾಲಂ ಮಯಾ ತಪ್ತಮನನ್ಯಮತಿನಾ ತಪಃ |
ತಸ್ಯೇಹ ತಪಸೋ ರಾಮ ಫಲಂ ತವ ಯದರ್ಶನಂ ||೪೩||

ಸದಾ ಮೇ ಸೀತಯಾ ಸಾರ್ಧಂ ಹೃದಯೇ ವಸ ರಾಘವ |
ಗಚ್ಛತಸ್ತಿಷ್ಠತೋ ವಾಪಿ ಸ್ಮೃತಿಃ ಸ್ಯಾನ್ಮೇ ಸದಾ ತ್ವಯಿ ||೪೪||

ಇತಿ ಸ್ತುತ್ವಾ ರಮಾನಾಥಮಗಸ್ತ್ಯೋ ಮುನಿಸತ್ತಮಃ |
ದದೌ ಚಾಪಂ ಮಹೇಂದ್ರೇಣ ರಾಮಾರ್ಥೇ ಸ್ಥಾಪಿತಂ ಪುರಾ |
ಅಕ್ಷಯ್ಯೌ ಬಾಣತೂಣೀರೌ ಖಡ್ಗಂ ರತ್ನವಿಭೂಷಿತಂ ||೪೫||

---

ವಿಸ್ತಾರವಾದ ನಿನ್ನ ವಿಷಯಕವಾದ ಜ್ಞಾನವು ಪ್ರಕಾಶಮಾನವಾಗುವುದು. ಪುರಾತನವಾದ ಈ ಮುಕ್ತಿಮಾರ್ಗವು ಉದಿಸುವುದು ||೪೦||

ಇದು ಜಾಣರಿಂದ ಗ್ರಹಿಸಲ್ಪಟ್ಟದ್ದು, ಅದಕಾರಣ ಎಲೈ ಶ್ರೀರಾಮನೇ! ನಿನ್ನಲ್ಲಿ ನನಗೆ ಅತ್ಯಂತವಾದ ಪ್ರೇಮವೇ ಲಕ್ಷಣವಾಗುಳ್ಳ ಯಾವ ಅಪೇಕ್ಷೆಯೂ ಇಲ್ಲದುದರಿಂದ ಸಾಧುವಾದ ಭಕ್ತಿಯು ಸದಾ ಉಂಟಾಗಲಿ. ಎಲೈ ಶ್ರೀಹರಿಯೇ! ನಿನ್ನ ಭಕ್ತರಲ್ಲಿ ವಿಶೇಷವಾಗಿ ಸಂಗವಾಗಲಿ ||೪೧||

ಈಗ ನಿನ್ನ ದರ್ಶನದಿಂದ ನನ್ನ ಜನ್ಮವು ಸಫಲವಾಯಿತು. ಎಲೈ ಪ್ರಭುವೇ! ಈಗ ನನ್ನ ಯಜ್ಞಗಳೆಲ್ಲವೂ ಸಫಲವಾದುವು ||೪೨||

ಎಲೈ ಶ್ರೀರಾಮನೇ! ನಿನ್ನಲ್ಲಿ ಏಕಾಗ್ರವಾದ ಬುದ್ಧಿಯುಳ್ಳ ನನ್ನಿಂದ ಬಹು ಕಾಲ ತಪಸ್ಸು ಮಾಡಲ್ಪಟ್ಟಿತು. ಈಗ ನಿನ್ನ ಪೂಜೆಯು ಯಾವುದದೋ ಇದೇ ಆ ತಪಸ್ಸಿಗೆ ಫಲವು ||೪೩||

ಎಲೈ ಶ್ರೀರಾಮನೇ! ಸೀತೆಯೊಡನೆ ಸರ್ವದಾ ನನ್ನ ಹೃದಯದಲ್ಲಿ ನೀನು ವಾಸವನ್ನು ಮಾಡುವನಾಗು. ನಡೆಯುವಾಗಲೂ, ನಿಂತಿರುವಾಗಲೂ ಕೂಡ ನನಗೆ ಸರ್ವದಾ ನಿನ್ನಲ್ಲಿ ಸ್ಮರಣೆಯಿರಲಿ ||೪೪||

ಎಂದು ಮುನಿಶ್ರೇಷ್ಠನಾದ ಅಗಸ್ತ್ಯನು ಲಕ್ಷ್ಮೀಪತಿಯಾದ ಶ್ರೀರಾಮನನ್ನು ಸ್ತುತಿಸಿ, ಆ ರಾಮನಿಗೋಸ್ಕರ ಪೂರ್ವದಲ್ಲಿ ಮಹೇಂದ್ರನಿಂದ ಇಡಲ್ಪಟ್ಟಿದ್ದ [illegible]

ಜಹಿ ರಾಘವ ಭೂಭಾರಭೂತಂ ರಾಕ್ಷಸಮಂಡಲಂ |
ಯದರ್ಥಮವತೀರ್ಣೋಽಸಿ ಮಾಯಯಾ ಮನುಜಾಕೃತಿಃ ||೪೬||
ಇತೋ ಯೋಜನಯುಗ್ಮೇ ತು ಪುಣ್ಯಕಾನನಮಂಡಿತಃ |
ಅಸ್ತಿ ಪಂಚವಟೀನಾಮ್ನಾ ಆಶ್ರಮೋ ಗೌತಮೀತಟೇ ||೪೭||
ನೇತವ್ಯಸ್ತತ್ರ ತೇ ಕಾಲಶ್ಶೇಷೋ ರಘುಕುಲೋದ್ವಹ |
ತತ್ರೈವ ಬಹುಕಾರ್ಯಾಣಿ ದೇವಾನಾಂ ಕುರು ಸತ್ಪತೇ ||೪೮||
ಶ್ರುತ್ವಾ ತದಾಗಸ್ತ್ಯಸುಭಾಷಿತಂ ವಚಸ್ಸ್ತೋತ್ರಂ ಚ ತತ್ತ್ವಾರ್ಥ
ಸಮನ್ವಿತಂ ವಿಭುಃ |
ಮುನಿಂ ಸಮಾಭಾಷ್ಯ ಮುದಾನ್ವಿತೋ ಯಯೌ ಪ್ರದರ್ಶಿತಂ ಮಾರ್ಗಮ
ಶೇಷವಿದ್ಧರಿಃ ||೪೯||

|| ತೃತೀಯಸ್ಸರ್ಗಃ ಸಮಾಪ್ತಃ ||

---

ರಾಮನ ಕೈಯಿಂದ ಬಂದಿದ್ದ ವೈಷ್ಣವಧನುವನ್ನೂ, ಬಾಣಗಳಿಗೆ ಕ್ಷಯವಿಲ್ಲದ ಬತ್ತಳಿಕೆಯನ್ನೂ, ರತ್ನಗಳಿಂದ ಅಲಂಕೃತವಾದ ಖಡ್ಗವನ್ನೂ ಕೊಟ್ಟನು ||೪೫||

ಎಲೈ ರಘುಶ್ರೇಷ್ಠನೇ! ಯಾವುದಕ್ಕೋಸುಗ ಮಾಯೆಯಿಂದ ಮನುಷ್ಯಾಕೃತಿಯಾಗಿ ಅವತರಿಸಿದ್ದೀಯೋ ಭೂಮಿಗೆ ಭಾರವಾದ ಆ ರಾಕ್ಷಸಮಂಡಲವನ್ನು ನೀನು ಸಂಹರಿಸುವನಾಗು ||೪೬||

ಇಲ್ಲಿಗೆ ಎರಡುಯೋಜನದ ದೂರದಲ್ಲಿ ಗೋದಾವರಿಯ ತೀರದಲ್ಲಿ ಪಂಚವಟಿಯೆಂಬ ಪವಿತ್ರವಾದ ಆಶ್ರಮವು ವನದಿಂದ ಅಲಂಕೃತವಾಗಿರುವುದು ||೪೭||

ಎಲೈ ರಘುಕುಲೋದ್ಧಾರಿಯೇ! ಆ ಆಶ್ರಮದಲ್ಲಿ ನೀನು ಹದಿನಾಲ್ಕು ವರ್ಷಗಳಲ್ಲಿ ಮಿಕ್ಕಿರುವ ಕಾಲವನ್ನು ಕಳೆಯುವುದು. ಎಲೈ ಸಜ್ಜನಪ್ರಭುವೇ! ಆ ಆಶ್ರಮದಲ್ಲೇ ನೀನು ದೇವತೆಗಳ ಕಾರ್ಯವನ್ನು ಅನೇಕವಾಗಿ ಮಾಡು ||೪೮||

ಜಗತ್ತಿಗೆ ಅಧಿಪತಿಯಾದ ಸರ್ವಜ್ಞನಾದ ಶ್ರೀರಾಮನೆನಿಸುವ ಹರಿಯು ಆ ಕಾಲದಲ್ಲಿ ಅಗಸ್ತ್ಯಮಹಾಮುನಿಯಿಂದ ಹೇಳಲ್ಪಟ್ಟ ತತ್ತ್ವಾರ್ಥದಿಂದ ಕೂಡಿದ ಸ್ತೋತ್ರವನ್ನೂ, ಮಾತನ್ನೂ ಕೇಳಿ ಸಂತುಷ್ಟನಾಗಿ ಆ ಮುನಿಯ ಅನುಜ್ಞೆಯನ್ನು ಪಡೆದು ಆತನಿಂದ ತೋರಿಸಲ್ಪಟ್ಟ ಮಾರ್ಗವನ್ನು ಹಿಡಿದು ಹೊರಟರು ||೪೯||

|| ಎಂಬಲ್ಲಿಗೆ ಮೂರನೇ ಸರ್ಗವು ಮುಗಿದುದು ||



# ಚತುರ್ದಶಸ್ಸರ್ಗಃ.

ಶ್ರೀ ಮಹಾದೇವಃ ||

ಮಾರ್ಗೇ ವ್ರಜನ್ದದರ್ಶಾಥ ಶೈಲಶೃಂಗಮಿವ ಸ್ಥಿತಂ |
ವೃದ್ಧಂ ಜಟಾಯುಷಂ ರಾಮಃ ಕಿಮೇತದಿತಿ ವಿಸ್ಮಿತಃ ||೧||

ಧನುರಾನಯ ಸೌಮಿತ್ರೇ ರಾಕ್ಷಸೋಽಯಂ ಪುರಃ ಸ್ಥಿತಃ |
ಇತ್ಯಾಹ ಲಕ್ಷ್ಮಣಂ ರಾಮೋ ಹನಿಷ್ಯಾಮ್ಯೃಷಿಭಕ್ಷಕಂ ||೨||

ತಚ್ಛ್ರುತ್ವಾ ರಾಮವಚನಂ ಗೃಧ್ರರಾಡ್ಭಯಪೀಡಿತಃ |
ವಧಾರ್ಹೋಽಹಂ ನ ತೇ ರಾಮ ಪಿತುಸ್ತೇಽಹಂ ಪ್ರಿಯಸ್ಸಖಾ |
ಜಟಾಯುರ್ನಾಮ ಭದ್ರಂ ತೇ ಗೃಧ್ರೋಽಹಂ ಪ್ರಿಯಕೃತ್ತವ ||೩||

ಪಂಚವಟ್ಯಾಮಹಂ ವತ್ಸ್ಯೇ ತವೈವ ಪ್ರಿಯಕಾಮ್ಯಯಾ |
ಮೃಗಯಾಯಾಂ ಕದಾಚಿತ್ತು ಪ್ರಯಾತೇ ಲಕ್ಷ್ಮಣೇಽಪಿ ಚ
ಸೀತಾ ಜನಕಕನ್ಯಾ ಮೇ ರಕ್ಷಣೀಯಾ ಪ್ರಯತ್ನತಃ ||೪||

---

ಶ್ರೀ ಪರಮೇಶ್ವರನು ಪಾರ್ವತಿಯನ್ನು ಕುರಿತು ಹೇಳುವನು.

ಆ ಬಳಿಕ ಶ್ರೀರಾಮನು ಮಾರ್ಗದಲ್ಲಿ ಹೋಗುತ್ತಾ ಬೆಟ್ಟದ ಕೋಡುಗಳಲ್ಲಿ ನಿಂತಿರುವ ವೃದ್ಧನಾದ ಜಟಾಯುವೆಂಬ ಗೃಧ್ರರಾಜನನ್ನು ಕಂಡನು. ಇದೇನೆಂದು ಆಶ್ಚರ್ಯಪಟ್ಟನು ||೧||

ಮತ್ತೆ ರಾಮನು ಎಲೈ ಲಕ್ಷ್ಮಣನೇ ಧನುವನ್ನು ತೆಗೆದುಕೊಂಡುಬಾ, ಈ ರಾಕ್ಷಸನು ಎದುರಿಗಿರುವನು, ಋಷಿಭಕ್ಷಕನಾದ ಇವನನ್ನು ಕೊಲ್ಲುವೆನೆಂದು ಲಕ್ಷ್ಮಣನಿಗೆ ಹೇಳಿದನು ||೨||

ಗೃಧ್ರರಾಜನು ಆ ರಾಮನಮಾತನ್ನು ಕೇಳಿ ಭಯದಿಂದ ವ್ಯಥೆಪಟ್ಟು ಈ ರೀತಿ ಹೇಳಿದನು ಎಲೈ ಶ್ರೀರಾಮನೇ! ನಿನಗೆ ಶುಭವಾಗಲಿ ನಿನಗೆ ನಾನು ವಧಿಸಲು ಯೋಗ್ಯನಲ್ಲ. ನಿನ್ನ ತಂದೆಯಾದ ದಶರಥನಿಗೆ ಪ್ರಿಯನಾದ ಸಖನು. ಜಟಾಯುವೆಂದು ಪ್ರಸಿದ್ಧನಾದ ಗೃಧ್ರನು. ನಿನಗೂ ನಾನು ಪ್ರಿಯವನ್ನು ಮಾಡುವವನು||

ನಿನಗೆ ಪ್ರಿಯವಾಗಬೇಕೆಂಬ ಇಚ್ಛೆಯಿಂದಲೇ ನಾನು ಪಂಚವಟಿಯಲ್ಲಿರುವೆನು.

ತಸ್ರೂಯತೇ ದೃಶ್ಯತೇ ಯದ್ಯತ್ಸ್ಮರ್ಯತೇ ವಾ ನರೈಸ್ಸದಾ |
ಅಸದೇವ ಹಿ ತತ್ಸರ್ವಂ ಯಥಾ ಸ್ವಪ್ನಮನೋರಥೌ ||೨೨||

ದೇಹ ಏವ ಹಿ ಸಂಸಾರವೃಕ್ಷಮೂಲಂ ಪರಂ ಸ್ಮೃತಂ |
ತನ್ಮೂಲಃ ಪುತ್ರದಾರಾದಿಬಂಧಃ ಕಿಂ ತೇನ್ಯಥಾತ್ಮನಃ ||೨೩||

ದೇಹಸ್ತು ಸ್ಥೂಲಭೂತಾನಾಂ ಪಂಚತನ್ಮಾತ್ರಪಂಚಕಂ |
ಅಹಂಕಾರಶ್ಚ ಬುದ್ಧಿಶ್ಚ ಇಂದ್ರಿಯಾಣಿ ತಥಾ ದಶ ||೨೪||

ಚಿದಾಭಾಸೋ ಮನಶ್ಚೈವ ಮೂಲಪ್ರಕೃತಿರೇವ ಚ |
ಏತತ್ಕ್ಷೇತ್ರಮಿತಿ ಜ್ಞೇಯಂ ದೇಹ ಇತ್ಯಭಿಧೀಯತೇ ||೨೫||

ಏತದ್ವಿಲಕ್ಷಣೋ ಜೀವಃ ಪರಮಾತ್ಮಾ ನಿರಾಮಯಃ |
ತಸ್ಯ ಜೀವಸ್ಯ ವಿಜ್ಞಾನೇ ಸಾಧನಾನ್ಯಪಿ ಮೇ ಶೃಣು ||೨೬||

---

ಭ್ರಾಂತಿಯಿಂದ ಹಗ್ಗದಲ್ಲಿನ ಹಾವಿನಂತೆ ಮಾಯೆಯಿಂದ ಕಲ್ಪಿತವಾಗುವುದು. ವಿಚಾರಿಸುವಲ್ಲಿ ಯಾವಾವುದೂ ಇಲ್ಲದಿರುವುದು ||೨೧||

ಯಾವುದು ಜನಗಳಿಂದ ಸರ್ವದಾ ಕೇಳಲ್ಪಡುವುದೋ, ಕಾಣಲ್ಪಡುವುದೋ, ಸ್ಮರಿಸಲ್ಪಡುವುದೋ ಅವೆಲ್ಲವೂ ಸ್ವಪ್ನಮನೋರಥದಂತೆ ಸುಳ್ಳೇ ಆಗುವುದು ||೨೨||

ಹೀಗೆ ಮಾಯಾಕಲ್ಪಿತವಾದ ದೇಹವೇ ಮುಖ್ಯವಾಗಿ ಸಂಸಾರವೃಕ್ಷಕ್ಕೆ ಮೂಲವೆಂದು ಸ್ಮೃತಿಗಳಲ್ಲಿ ಹೇಳಲ್ಪಡುವುದು. ಆ ದೇಹದಿಂದಲೇ ಪುತ್ರದಾರಾದಿಗಳ ಸಂಬಂಧರೂಪವಾದ ಬಂಧವು. ಹಾಗಲ್ಲದೆ ಆತ್ಮನಾದ ನಿನಗೇನಿರುವುದು ? ||೨೩||

ಮಹಾಭೂತಗಳ ಪಂಚಕವೇ ಸ್ಥೂಲದೇಹವು. ತನ್ಮಾತ್ರಗಳ ಪಂಚಕವೇ ಸೂಕ್ಷ್ಮದೇಹವು. ಇದಕ್ಕೆ ಅಭಿನ್ನವಾದ ಅಹಂಕಾರವೂ, ಬುದ್ಧಿಯೂ ದಶೇಂದ್ರಿಯಗಳು ||೨೪||

ಚಿದಾಭಾಸನಾದ ಜೀವನು ಮನವು. ಮೂಲಪ್ರಕೃತಿಯೂ ಸಹ ಕ್ಷೇತ್ರವೆಂದು ತಿಳಿಯುವುದು. ಇದೇ ದೇಹವೆಂತಲೂ ಹೇಳಲ್ಪಡುವುದು. ಇಲ್ಲಿ ಅಂತಃಕರಣಾದಿ ಅಭಿಮಾನದಿಂದ ಸಂಸಾರಿಯಾಗಿರುವವನೇ ಚಿದಾಭಾಸನೆನಿಸುವ ಜೀವನು. ಇವನೇ ಜ್ಞಾನದಿಂದ ವಿರಕ್ತನಾಗಿ ಪಾರಮಾರ್ಥಿಕನೆನಿಸುವನು. ಅಖಂಡಜ್ಞಾನದಿಂದ ಅಹಂಭಾವವು ತಪ್ಪುವಲ್ಲಿ ಪರಮಾತ್ಮನೆನಿಸುವನು ||೨೫||

ದೇಹಾದಿ ಸಂಬಂಧವಿಲ್ಲದುದರಿಂದ ನಿರಾಮಯನೆನಿಸುತ್ತಾ ಇವುಗಳಿಗೆ ಭಿನ್ನ

ಜೀವಶ್ಚ ಪರಮಾತ್ಮಾ ಚ ಪರ್ಯಾಯೋ ನಾತ್ರ ಭೇದಧೀಃ ।
ಮಾನಾಭಾವಸ್ತಥಾ ದಂಭ ಹಿಂಸಾದಿ ಪರಿವರ್ಜನಂ ॥೨೭॥

ಪರಾಕ್ಷೇಪಾದಿಸಹನಂ ಸರ್ವತ್ರಾವಕ್ರತಾ ತಥಾ ।
ಮನೋವಾಕ್ಕಾಯಸದ್ಭಕ್ತ್ಯಾ ಸದ್ಗುರೋಃ ಪರಿಸೇವನಂ ॥೨೮॥

ಬಾಹ್ಯಾಭ್ಯಂತರಸಂಶುದ್ಧಿಃ ಸ್ಥಿರತಾ ಸತ್ಕ್ರಿಯಾದಿಷು ।
ಮನೋವಾಕ್ಕಾಯದಂಡಶ್ಚ ವಿಷಯೇಷು ನಿರೀಹತಾ ॥೨೯॥

ನಿರಹಂಕಾರತಾ ಜನ್ಮಜರಾದ್ಯಾಲೋಚನಂ ತಥಾ ।
ಅಸಕ್ತಿಃ ಸ್ನೇಹಶೂನ್ಯತ್ವಂ ಪುತ್ರದಾರಧನಾದಿಷು ॥೩೦॥

---

ವಾದ ಲಕ್ಷಣವುಳ್ಳ ಪರಮಾತ್ಮನೇ ಪ್ರಾಣಧಾರಣಾನುಕೂಲಕ್ರಿಯೆಯಿಂದ ಜೀವನೆನಿಸುವನು. ವಿವೇಕಧ್ಯಾನವಿಚಾರಾದಿಗಳಿಂದ ಇವನನ್ನೇ ಜೀವನೆಂದು ತಿಳಿಯುವುದು. ಇವನ ತಿಳುವಳಿಕೆಗೆ ಸಾಧನಗಳನ್ನೂ ಕೂಡ ನನ್ನಿಂದ ಕೇಳುವನಾಗು ॥

ಜೀವನೆಂತಲೂ, ಪರಮಾತ್ಮನೆಂತಲೂ ಶಬ್ದಭೇದವಲ್ಲದೆ ವಸ್ತುಭೇದವಿಲ್ಲದುದರಿಂದ ಈ ಹೆಸರುಗಳು ಪರ್ಯಾಯವೆನಿಸುವುವು. ಇಲ್ಲಿ ಭೇದವಿಲ್ಲವೆಂಬ ಬುದ್ಧಿಯೇ ಮುಖ್ಯ ಸಾಧನವು. ಮತ್ತು ವಿವೇಕದಿಂದ ಜ್ಞಾನಿತ್ವವ ತಾನೆನ್ನುವುದೇ ಮೊದಲಾದ ನಿರಭಿಮಾನಜ್ಞಾನವೂ ವ್ಯಾಜಾಂತರಾದಿಗಳಿಂದ ಆಗುವ ದ್ರೋಹಾಲೋಚನೆಯನ್ನು ಬಿಡುವುದೂ ಸಹ ಜ್ಞಾನಿಗಳ ಲಕ್ಷಣವು ॥೨೭॥

ಆತ್ಮನನ್ನು ಯಾರು ಆಕ್ಷೇಪಿಸಿದರೂ ದೇಹ ನಾನಲ್ಲವೆಂಬ ಆಲೋಚನೆಯಿಂದ ಪರರ ಆಕ್ಷೇಪವನ್ನು ಸಹಿಸುವುದೂ, ಹಾಗೆಯೇ ಸರ್ವದೇಶಕಾಲಗಳಲ್ಲಿಯೂ ವಕ್ರಭಾವವಿಲ್ಲದಿರುವುದೂ, ಮನೋವಾಕ್ಕಾಯಗಳೆಂಬ ತ್ರಿಕರಣದಲ್ಲೂ ಪರಿಶುದ್ಧವಾದ ಭಕ್ತಿಯಿಂದ ನಿತ್ಯಸ್ವರೂಪನಾದ ಪರಮಾತ್ಮಜ್ಞಾನವಿಷಯದಲ್ಲಿ ಗುರುವಾದವನನ್ನು ಚೆನ್ನಾಗಿ ಸೇವಿಸೋಣವೂ ॥೨೮॥

ಹೊರಗೂ ಒಳಗೂ ಕೂಡ ದುಸ್ಸಂಗ ದುರಾಲೋಚನೆಗಳಿಲ್ಲದೆ ಶುದ್ಧವಾಗಿರುವುದೂ, ಒಳ್ಳೇ ವ್ಯಾಪಾರಾದಿಗಳಲ್ಲಿ ಎಡಬಿಡದಿರುವುದೂ, ಮನೋವಾಕ್ಕಾಯಗಳನ್ನು ನಿಗ್ರಹಿಸುವುದೂ, ವಿಷಯಗಳು ಪ್ರಾಪ್ತವಾದಾಗ್ಯೂ ಅಪೇಕ್ಷೆಯಿಲ್ಲದಿರುವುದೂ ॥೨೯॥

ವಿವೇಕದಿಂದ ಅಹಂಕಾರವಿಲ್ಲದಿರುವುದೂ, ಹಾಗೆಯೇ ಅವಿವೇಕದಿಂದ ಬಂದ

ಇಷ್ಟಾನಿಷ್ಟಾಗಮೇ ನಿತ್ಯಂ ಚಿತ್ತಸ್ಯ ಸಮತಾ ತಥಾ |
ಮಯಿ ಸರ್ವಾತ್ಮಕೇ ರಾಮೇ ಹ್ಯನನ್ಯವಿಷಯಾ ಮತಿಃ ||೩೧||

ಜನಸಂಬಾಧರಹಿತಶುದ್ಧದೇಶನಿಷೇವಣಂ |
ಪ್ರಾಕೃತೈರ್ಜನಸಂಘೈಶ್ಚ ಹ್ಯರತಿಃ ಸರ್ವದಾ ಭವೇತ್ ||೩೨||

ಆತ್ಮಜ್ಞಾನೇ ಸದೋದ್ಯೋಗೋ ವೇದಾಂತಾರ್ಥಾವಲೋಕನಂ |
ಉಕ್ತೈರೇತೈರ್ಭವೇತ್ ಜ್ಞಾನಂ ವಿಪರೀತೈರ್ವಿಪರ್ಯಯಃ ||೩೩||

ಬುದ್ಧಿಪ್ರಾಣಮನೋದೇಹಾಹಂಕೃತಿಭ್ಯೋ ವಿಲಕ್ಷಣಃ |
ಚಿದಾತ್ಮಾಹಂ ನಿತ್ಯಶುದ್ಧೋ ಬುದ್ಧ ಏವೇತಿ ನಿಶ್ಚಯಂ ||೩೪||

ಯೇನ ಜ್ಞಾನೇನ ಸಂವಿತ್ತಿ ತತ್ ಜ್ಞಾನಂ ನಿಶ್ಚಿತಂ ಚ ಮೇ |
ವಿಜ್ಞಾನಂ ಚ ತದೈವೈತತ್ಸಾಕ್ಷಾದನುಭವೇದ್ಯದಾ ||೩೫||

---

ರುವ ಜನನ ವೃದ್ಧತ್ವಾದಿಗಳನ್ನು ಆಲೋಚಿಸವುದೂ. ಪುತ್ರ ಪತ್ನೀ ವಿತ್ತಾದಿಗಳಲ್ಲಿ ಆಸಕ್ತಿ ಇಲ್ಲದಿರುವುದೂ. ಪ್ರೀತಿ ಇಲ್ಲದಿರುವುದೂ ||೩೦||

ಇಷ್ಟಾನಿಷ್ಟಪ್ರಾಪ್ತಿಗಳಲ್ಲಿ ಸರ್ವಕಾಲದಲ್ಲೂ ಚಿತ್ತಕ್ಕೆ ಹರ್ಷದುಃಖಾದಿಗಳಿಲ್ಲದೆ ಸಮವಾಗಿರುವುದೂ, ಸರ್ವಪ್ರಾಣಿಗಳಲ್ಲಿ ಆತ್ಮನಾಗಿಯೂ, ಸರ್ವರೂಪನಾಗಿಯೂ ಇರುತ್ತ ಜ್ಞಾನಯೋಗಗಳಿಗೆ ವಿಹಾರಸ್ಥಾನವಾಗಿ ರಾಮನೆನಿಸುವ ನನ್ನ ಧ್ಯಾನಾದಿಗಳಲ್ಲಿ ಅನ್ಯವಿಷಯವನ್ನು ಆಲೋಚಿಸದಿರುವ ಬುದ್ಧಿಯೂ ||೩೧||

ಜನಸಮ್ಮರ್ದವಿಲ್ಲದ ಶುದ್ಧವಾದ ಪ್ರದೇಶದಲ್ಲಿರುವುದೂ, ಪ್ರಾಕೃತ ಜನಗಳೊಡನೆ ಸಂಗವಿಲ್ಲದಿರುವುದೂ ||೩೨||

ಆತ್ಮನನ್ನು ತಿಳಿಯುವುದರಲ್ಲಿ ಸರ್ವಕಾಲದಲ್ಲೂ ಪ್ರಯತ್ನವೂ, ವೇದಾಂತ ವಿಚಾರವೂ ಕೂಡ ಸಾಧನವೆನಿಸುವುದು ಮೇಲೆ ಹೇಳಲ್ಪಟ್ಟ ಸಾಧನಗಳಿಂದ ಜ್ಞಾನವು ಉದಿಸುವುದು. ಇವುಗಳಿಗೆ ವಿರುದ್ಧವಾದುದಾದರೆ ಅಜ್ಞಾನವು ಒಲಿಯುವುದು ||೩೩||

ಬುದ್ಧಿ ಪ್ರಾಣ ಮನೋದೇಹಾದಿ ಅಹಂಕಾರಗಳಿಗೆ ಭಿನ್ನನಾದ ನಿತ್ಯ ಪರಿಶುದ್ಧನಾಗಿಯೂ ಜ್ಞಾನಸ್ವರೂಪನಾಗಿಯೂ ಇರುವ ಜಡಪದಾರ್ಥಗಳಿಗೆ ಚೈತನ್ಯವನ್ನು ಉಂಟುಮಾಡುವ ರೂಪವುಳ್ಳ ಆತ್ಮನೇ ನಾನೆಂಬ ನಿಶ್ಚಯವನ್ನೂ ಕೂಡ ಜ್ಞಾನಸಾಧನವೆಂದು ಹೇಳುವರು ||೩೪||

ಯಾವ ಜ್ಞಾನದಿಂದ ನಿನಗೆ ಪದಾರ್ಥದ ಜ್ಞಾನವು ಉದಿಸುವುದೋ ಅದೇ

ಆತ್ಮಾ ಸರ್ವತ್ರ ಪೂರ್ಣಃ ಸ್ಯಾಚ್ಚಿದಾನಂದಾತ್ಮಕೋಽವ್ಯಯಃ |
ಬುದ್ಧ್ಯಾದ್ಯುಪಾಧಿರಹಿತಃ ಪರಿಣಾಮಾದಿವರ್ಜಿತಃ ||೩೬||

ಸ್ವಪ್ರಕಾಶೇನ ದೇಹಾದೀನ್ ಭಾಸಯನ್ನನಪಾವೃತಃ |
ಏಕ ಏವಾದ್ವಿತೀಯಶ್ಚ ಸತ್ಯಜ್ಞಾನಾದಿಲಕ್ಷಣಃ |
ಅಸಂಗಃ ಸ್ವಪ್ರಭೋ ದ್ರಷ್ಟಾ ವಿಜ್ಞಾನೇನಾವಗಮ್ಯತೇ ||೩೭||

ಆಚಾರ್ಯಶಾಸ್ತ್ರೋಪದೇಶಾದೈಕ್ಯಜ್ಞಾನಂ ಯದಾ ಭವೇತ್ |
ಆತ್ಮನೋರ್ಜೀವಪರಯೋರ್ಮೂಲಾವಿದ್ಯಾ ತದೈವ ಹಿ |
ಲೀಯತೇ ಕಾರ್ಯಕರಣೈಃ ಸಹೈವ ಪರಮಾತ್ಮನಿ ||೩೮||

---

ಜ್ಞಾನವೆಂದು ನನ್ನ ನಿಶ್ಚಯವು. ಆ ಬ್ರಹ್ಮವೇ ಇದೆಂದು ಪ್ರತ್ಯಕ್ಷವಾದ ಅನುಭವವು ಯಾವಾಗ ಆಗುವುದೋ ಅದೇ ವಿಜ್ಞಾನವೆನಿಸುವುದು ||೩೫||

ಆತ್ಮನು ಎಲ್ಲಾ ಕಡೆಯಲ್ಲೂ ಪೂರ್ಣನಾದವನು, ಜ್ಞಾನಾನಂದಗಳೇ ಸ್ವರೂಪವಾಗಿರುವನು, ಎಂದೆಂದಿಗೂ ನಾಶವಿಲ್ಲದವನು, ಬುದ್ಧಿ ಮೊದಲಾದ ಉಪಾಧಿಗಳಿಲ್ಲದವನು, ಪರಿಣಮಿಸುವುದು ಮೊದಲಾದ ವಿಕಾರವಿಲ್ಲದವನು ||೩೬||

ಈ ಆತ್ಮನು ಮತ್ತೊಂದರಿಂದ ತಾನು ಆವರಿಸಲ್ಪಡದೆ ಸ್ವಪ್ರಕಾಶದಿಂದ ದೇಹಾದಿಗಳನ್ನು ಪ್ರಕಾಶಪಡಿಸುತ್ತಾ ಸ್ವಜಾತೀಯ ಜೀವಭೇದವೂ, ವಿಜಾತೀಯ ಮಾಯಾಪ್ರಪಂಚಭೇದವೂ ಸ್ವಗತಜ್ಞಾನಶಕ್ತ್ಯಾದಿಭೇದವೂ ಇಲ್ಲದೆ ಸತ್ಯಜ್ಞಾನಾದಿಗಳೇ ಲಕ್ಷಣವಾಗಿರುವವನೂ, ಅನ್ಯಪದಾರ್ಥಗಳಿಲ್ಲದಿರುವುದರಿಂದ ಸಂಗವಿಲ್ಲದವನೂ, ತನಗೆ ಪ್ರಕಾಶವಾದ ವಸ್ತು ಇಲ್ಲದುದರಿಂದ ತಾನೇ ಪ್ರಕಾಶಿಸುವವನೂ ಎಲ್ಲಕ್ಕೂ ದ್ರಷ್ಟೃವಾಗಿರುವವನೂ ಆದ ಇಂಥಾ ಆತ್ಮನು ಜ್ಞಾನವು ಉದಿಸಿದರೆ ತಾನೇ ಗೋಚರನಾಗುವನು ||೩೭||

ಶಾಸ್ತ್ರಗಳನ್ನು ನೋಡಿ ತತ್ವವನ್ನು ನಿಶ್ಚಯಿಸಿ ಆರೀತಿಯಾಗಿ ನಡೆಯುವ ಆಚಾರ್ಯನ ಶಾಸ್ತ್ರಮೂಲಕವಾದ ಉಪದೇಶದಿಂದ ಬ್ರಹ್ಮಕ್ಕೆ ತಾನು ಭಿನ್ನವಲ್ಲವೆಂಬ ಜ್ಞಾನವು ಯಾವಾಗ ಉದಿಸುವುದೋ ಆಗಲೇ ಮೂಲಾಜ್ಞಾನರೂಪವಾದ ಮಾಯೆಯು ತನಗೆ ಕಾರ್ಯವಾದ ಪ್ರಪಂಚದಿಂದಲೂ, ಜ್ಞಾನ ಮೊದಲಾದ ಕಾರಣಗಳಿಂದಲೂ ಕೂಡಿ ಆತ್ಮನಲ್ಲೇ ಲಯಿಸುವುದು ||೩೮||

ಸಾವಸ್ಥಾ ಮುಕ್ತಿರಿತ್ಯುಕ್ತಾ ಹ್ಯುಪಚಾರೋಽಯಮಾತ್ಮನಿ |
ಇದಂ ಮೋಕ್ಷಸ್ವರೂಪಂ ತೇ ಕಥಿತಂ ರಘುನಂದನ |
ಜ್ಞಾನವಿಜ್ಞಾನವೈರಾಗ್ಯಸಹಿತಂ ಮೇ ಪರಾತ್ಮನಃ ||೩೯||

ಕಿಂ ತ್ವೇತದ್ದುರ್ಲಭಂ ಮನ್ಯೇ ಮದ್ಭಕ್ತಿವಿಮುಖಾತ್ಮನಾಂ |
ಚಕ್ಷುಷ್ಮತಾಮಪಿ ಯಥಾ ರಾತ್ರೌ ಸಮ್ಯಙ್ನ ದೃಶ್ಯತೇ ||೪೦||

ಪದಂ ದೀಪಸಮೇತಾನಾಂ ದೃಶ್ಯತೇ ಸಮ್ಯಗೇವ ಹಿ |
ಏವಂ ಮದ್ಭಕ್ತಿಯುಕ್ತಾನಾಮಾತ್ಮಾ ಸಮ್ಯಕ್ಪ್ರಕಾಶತೇ ||೪೧||

ಮದ್ಭಕ್ತೇಃ ಕಾರಣಂ ಕಿಂಚಿದ್ವಕ್ಷ್ಯಾಮಿ ಶೃಣು ತತ್ತ್ವತಃ |
ಮದ್ಭಕ್ತಸಂಗೋ ಮತ್ಸೇವಾ ಮದ್ಭಕ್ತಾನಾಂ ನಿರಂತರಂ ||೪೨||

ಏಕಾದಶ್ಯುಪವಾಸಾದಿ ಮಮ ಪರ್ವಾನುಮೋದನಂ |
ಮತ್ಕಥಾಶ್ರವಣೇ ಪಾಠೇ ವ್ಯಾಖ್ಯಾನೇ ಸರ್ವದಾ ರತಿಃ |
ಮತ್ಪೂಜಾ ಪರಿನಿಷ್ಠಾ ಚ ಮಮ ನಾಮಾನುಕೀರ್ತನಂ ||೪೩||

ಆ ಅವಸ್ಥೆಯೇ ಮುಕ್ತಿಯೆಂದು ಹೇಳಲ್ಪಡುವುದು. ಇದು ಚಿತ್ತವನ್ನು ವ್ಯಾಪಿಸಿದುದರಿಂದ ಜೀವನೆನಿಸಿದ ಆತ್ಮನಲ್ಲಿ ಉಪಚರಿಸುವುದು. ಎಲೈ ರಘುನಂದನನೆ! ಪರಮಾತ್ಮನಾದ ನನಗೆ ಸಂಬಂಧಿಯಾದ ಜ್ಞಾನ, ವಿಜ್ಞಾನ, ವೈರಾಗ್ಯಸಹಿತವಾದ ಈ ಮೋಕ್ಷದ ಸ್ವರೂಪವು ನಿನಗೆ ಹೇಳಲ್ಪಟ್ಟಿತು ||೩೯||

ಆದರೆ ಕಣ್ಣುಳ್ಳವರಿಗೂ ಕೂಡ ಹ್ಯಾಗೆ ರಾತ್ರಿಯಲ್ಲಿ ಪದಾರ್ಥವು ಚನ್ನಾಗಿ ಕಾಣುವುದಿಲ್ಲವೋ ಹಾಗೆ ನನ್ನ ಭಕ್ತಿಯಲ್ಲಿ ಪರಾಙ್ಮುಖರಾದವರಿಗೆ ಇದು ಪಡೆಯ ಲಶಕ್ಯವಾದುದೆಂದು ತಿಳಿಯುತ್ತದೆ ||೪೦||

ದೀಪಧಾರಿಗಳಿಗೆ ನೋಡತಕ್ಕ ಸ್ಥಳವು ಚನ್ನಾಗಿ ಹೇಗೆ ಕಾಣುವುದೋ ಹಾಗೆ ನನ್ನಲ್ಲಿ ಭಕ್ತಿಯುಳ್ಳವರಿಗೆ ಆತ್ಮನು ಚನ್ನಾಗಿ ಪ್ರಕಾಶಿಸುವನು ||೪೧||

ನನ್ನ ಭಕ್ತಿಗೆ ಸಾಧನವಾದುದನ್ನೂ ಸ್ವಲ್ಪ ಹೇಳುವೆನು. ಯಥಾರ್ಥವಾಗಿ ಅದನ್ನು ನೀನು ಕೇಳುವನಾಗು. ನನ್ನ ಭಕ್ತರೊಡನೆ ಯಾವಾಗಲೂ ಸ್ನೇಹವೂ, ನನ್ನ ಸೇವೆಯೂ ನನ್ನ ಭಕ್ತರ ಸೇವೆಯೂ ||೪೨||

ಏಕಾದಶಿ ಉಪವಾಸ ಮೊದಲಾಗಿ ನನ್ನ ನಿಮಿತ್ತವಾದ ಉಪವಾಸವೂ ಪರ್ವ ಗಳಲ್ಲಿ ಮಾಡತಕ್ಕ ಕರ್ಮಗಳ ಅನುಷ್ಠಾನವೂ, ನನ್ನ ಕಥೆಯ ಶ್ರವಣದಲ್ಲೂ,

ಏವಂ ಸತತಯುಕ್ತಾನಾಂ ಭಕ್ತಿರವ್ಯಭಿಚಾರಿಣೀ ।
ಮಯಿ ಸಂಜಾಯತೆ ನಿತ್ಯಂ ತತಃ ಕಿಮವಶಿಷ್ಯತೆ ॥೪೪॥
ಅತೊ ಮದ್ಭಕ್ತಿಯುಕ್ತಸ್ಯ ಜ್ಞಾನಂ ವಿಜ್ಞಾನಮೇವ ಚ ।
ವೈರಾಗ್ಯಂ ಚ ಭವೇಚ್ಛೀಘ್ರಂ ತತೊ ಮುಕ್ತಿಮವಾಪ್ನುಯಾತ್ ॥೪೫॥
ಕಥಿತಂ ಸರ್ವಮೇತತ್ತೇ ತವ ಪ್ರಶ್ನಾನುಸಾರತಃ ।
ಅಸ್ಮಿನ್ ಮನಸ್ಸಮಾಧಾಯ ಯಸ್ತಿಷ್ಠೇತ್ಸ ತು ಮುಕ್ತಿಭಾಕ್ ॥೪೬॥
ನ ವಕ್ತವ್ಯಮಿದಂ ಯತ್ನಾನ್ಮದ್ಭಕ್ತಿವಿಮುಖಾಯ ಹಿ ।
ಮದ್ಭಕ್ತಾಯ ಪ್ರದಾತವ್ಯಮಾಹೂಯಾಪಿ ಪ್ರಯತ್ನತಃ ॥೪೭॥
ಯ ಇದಂ ತು ಪಠೇನ್ನಿತ್ಯಂ ಶ್ರದ್ಧಾಭಕ್ತಿಸಮನ್ವಿತಃ ।
ಅಜ್ಞಾನಪಟಲಧ್ವಾಂತಂ ವಿಧೂಯ ಪರಿಮುಚ್ಯತೆ ॥೪೮॥

---

ಪಠನದಲ್ಲೂ, ವಿವರಿಸುವುದರಲ್ಲೂ ಕೂಡ ಸರ್ವದಾ ಆಸಕ್ತಿಯೂ ನನ್ನ ಪೂಜೆಯೂ ನನ್ನ ನಾಮಸಂಕೀರ್ತನವೂ ಸಹ ನನ್ನ ಭಕ್ತಿಗೆ ಸಾಧನವಾಗುವುದು ॥

ಈ ರೀತಿಯಾಗಿ ಸರ್ವದಾ ನನ್ನಲ್ಲಿ ಆಸಕ್ತರಾಗಿರುವವರಿಗೆ ಸರ್ವತ್ರ ನನ್ನನ್ನೇ ಕಾಣಲ್ಪಡುವ ಅನನ್ಯವಾದ ಭಕ್ತಿಯು ನನ್ನಲ್ಲಿ ಉಂಟಾಗುವುದು. ಇದಾದ ಬಳಿಕ ಇನ್ನಾಗತಕ್ಕದ್ದೇನುಳಿಯುವುದು ? ॥೪೪॥

ಈಪ್ರಕಾರ ಉಂಟಾದ ನನ್ನ ಭಕ್ತಿಯಿಂದ ಕೂಡಿದವನಿಗೆ ನನ್ನ ಜ್ಞಾನವೂ, ಅನುಭವಜ್ಞಾನವೂ, ಆ ಪದಾರ್ಥದ ಆಶೆಯಿಲ್ಲವೆನಿಸುವ ವೈರಾಗ್ಯವೂ ಸಹ ಹುಟ್ಟುವುದು. ಜಾಗ್ರತೆಯಾಗಿ ಇದರಿಂದ ಮುಕ್ತಿಯನ್ನು ಪಡೆವನು ॥೪೫॥

ಎಲೈ ಲಕ್ಷ್ಮಣನೇ! ನಿನ್ನ ಪ್ರಶ್ನೆಗೆ ಅನುಸಾರವಾಗಿ ಇದೆಲ್ಲವನ್ನೂ ನಿನಗೆ ಹೇಳಲ್ಪಟ್ಟಿತು. ಇಲ್ಲಿ ಯಾವನು ಮನಸ್ಸನ್ನು ನಿಲ್ಲಿಸುವನೋ ಅವನು ಮುಕ್ತಿಯನ್ನು ಪಡೆಯುವನು ॥೪೬॥

ನನ್ನ ಭಕ್ತಿಯಲ್ಲಿ ಪರಾಙ್ಮುಖನಾದವನಿಗೆ ಇದು ಸರ್ವದಾ ಹೇಳತಕ್ಕದ್ದಲ್ಲ. ನನ್ನಲ್ಲಿ ಭಕ್ತಿಯುಳ್ಳವನಿಗಿದು ಸರ್ವಪ್ರಕಾರದಿಂದಲೂ ಕರೆದು ಕೊಡತಕ್ಕುದು ॥

ಯಾವನು ಇದನ್ನು ವಿಶ್ವಾಸಪೂರ್ವಕವಾದ ಶ್ರದ್ಧೆಯಿಂದಲೂ, ಅತಿ ಪ್ರೇಮರೂಪವಾದ ಭಕ್ತಿಯಿಂದಲೂ ಕೂಡಿ ನಿತ್ಯವೂ ಪಠಿಸುವನೋ ಅವನು ಜ್ಞಾನದಿಂದ ಅಜ್ಞಾನಸ್ವರೂಪವಾದ ಕತ್ತಲೆಯನ್ನು ತಳ್ಳಿ ಮುಕ್ತನಾಗುವನು ॥೪೮॥

ಭಕ್ತಾನಾಂ ಮಮ ಯೋಗಿನಾಂ ಸುವಿಮಲಸ್ವಾಂತಾತಿಶಾಂತಾತ್ಮನಾಂ|
ಮತ್ಸೇವಾಭಿರತಾತ್ಮನಾಂ ಚ ವಿಮಲಜ್ಞಾನಾತ್ಮನಾಂ ಸರ್ವದಾ |
ಸಂಗಂ ಯಃ ಕುರುತೆ ಸದೋದ್ಯತಮತಿಸ್ತತ್ಸೇವನಾನನ್ಯಧೀರ್ಮೋಕ್ಷಸ್ತಸ್ಯ
ಕರೆ ಸ್ಥಿತೋಹಮನಿಶಂ ದೃಶ್ಯೋ ಭವೇ ನಾನ್ಯಥಾ ||೪೯||

|| ಚತುರ್ಥಸ್ಸರ್ಗಃ ಸಮಾಪ್ತಃ ||



---

ನನಗೆ ಭಕ್ತರಾಗಿ, ಯೋಗಾಭ್ಯಾಸಿಗಳಾಗಿ. ನಿರ್ಮಲವಾದ ಮನಸ್ಸೂ, ಅತ್ಯಂತ ಶಾಂತಿಯುಳ್ಳ ಸ್ವಭಾವವೂ ಉಳ್ಳವರಾಗಿ ನನ್ನ ಸೇವೆಯಲ್ಲೇ ಆಸಕ್ತರಾದಕಾರಣ ನಿರ್ಮಲವಾದ ಜ್ಞಾನವುಳ್ಳ ಬುದ್ಧಿಶೀಲರಾದ ಸಜ್ಜನರ ಸಂಗವನ್ನು ಯಾವನು ಸರ್ವದಾ ಮಾಡುವನೋ ಅವನು ಸರ್ವಕಾಲದಲ್ಲೂ ನನ್ನ ವಿಷಯದಲ್ಲಿ ಉದ್ಯುಕ್ತನಾಗಿ ಸತ್ಪುರುಷರ ಸೇವೆಯಿಂದ ಏಕಾಗ್ರವಾದ ಬುದ್ಧಿಯುಳ್ಳವನಾಗುವನು. ಮೋಕ್ಷವು ಇವನಕಯ್ಯಲ್ಲೇ ಇರುವುದು. ಸರ್ವಕಾಲದಲ್ಲೂ ಅವನಿಗೆ ನಾನು ಗೋಚರನಾಗುವೆನಲ್ಲದೆ ಪ್ರಕಾರಾಂತರದಿಂದ ಕಾಣಲಾರೆನು ||೪೯||

|| ನಾಲ್ಕನೆಯ ಸರ್ಗವು ಮುಗಿದುದು ||



# ಪಂಚಮಸ್ಸರ್ಗಃ.

ಶ್ರೀ ಮಹಾದೇವಃ ||

ತಸ್ಮಿನ್ಕಾಲೆ ಮಹಾರಣ್ಯೆ ರಾಕ್ಷಸೀ ಕಾಮರೂಪಿಣೀ |
ವಿಚಚಾರ ಮಹಾಸತ್ವಾ ಜನಸ್ಥಾನನಿವಾಸಿನೀ ||೧||

ಏಕದಾ ಗೌತಮೀತೀರೆ ಪಂಚವಟ್ಯಾಃ ಸಮೀಪತಃ |
ಪದ್ಮವಜ್ರಾಂಕುಶಾಂಕಾನಿ ಪದಾನಿ ಜಗತೀಪತೇಃ |
ದೃಷ್ಟ್ವಾ ಕಾಮಪರೀತಾತ್ಮಾ ಪಾದಸೌಂದರ್ಯಮೋಹಿತಾ ||೨||

ಪಶ್ಯಂತೀ ಸಾ ಶನೈರಾಯಾದ್ರಾಘವಸ್ಯ ನಿವೇಶನಂ |
ತತ್ರ ಸಾ ತತಂ ರಮಾನಾಥಂ ಸೀತಯಾ ಸಹ ಸಂಸ್ಥಿತಂ |
ಕಂದರ್ಪಸದೃಶಂ ರಾಮಂ ದೃಷ್ಟ್ವಾ ಕಾಮವಿಮೋಹಿತಾ ||೩||

ರಾಕ್ಷಸೀ ರಾಘವಂ ಪ್ರಾಹ ಕಸ್ಯ ತ್ವಂ ಕಃ ಕಿಮಾಶ್ರಮೆ |
ಯುಕ್ತೋ ಜಟಾವಲ್ಕಲಾದ್ಯೈಃ ಸಾಧ್ಯಂ ಕಿಂ ತೇತ್ರ ಮೆ ವದ ||೪||

---

ಪಾರ್ವತೀಯನ್ನು ಕುರಿತು ಪರಮೇಶ್ವರನು ಹೇಳುವನು ||

ಪಂಚವಟೀ ಕ್ಷೇತ್ರದಲ್ಲಿ ಶ್ರೀರಾಮನಿರಲು ಆ ಕಾಲದಲ್ಲಿ ಮಹತ್ತಾದ ಅರಣ್ಯದಲ್ಲಿ ಹೆಚ್ಚಾದ ಬಲವುಳ್ಳವಳಾಗಿ ಜನಸ್ಥಾನದಲ್ಲಿರುವ ರೂಪವತಿಯಾದ ಶೂರ್ಪಣಖಿಯು ಸಂಚರಿಸಿದಳು ||೧||

ಒಂದುಸಾರಿ ಗೋದಾವರಿಯ ದಡದಲ್ಲಿ ಪಂಚವಟಿಯ ಸಮೀಪದಲ್ಲಿ ಪದ್ಮ ವಜ್ರಾಂಕುಶಗಳ ಗುರುತುಳ್ಳ ಶ್ರೀರಾಮನ ಹೆಜ್ಜೆಗಳನ್ನು ಕಂಡು ಕಾಮವಿಕಾರದಿಂದ ಕೂಡಿ ಹೆಜ್ಜೆಯ ಸೌಂದರ್ಯದ ನೋಟದಿಂದಲೇ ಮೋಹಿತಳಾದಳು ||೨||

ಆ ರಾಕ್ಷಸಿಯೂ ರಾಮನ ಹೆಜ್ಜೆಗಳನ್ನು ನೋಡುತ್ತಾ ಮೆಲ್ಲಗೆ ಶ್ರೀರಾಮನ ಮನೆಯನ್ನು ಸೇರಿದಳು. ಅಲ್ಲಿ ಆ ರಾಕ್ಷಸಿಯೂ ಮನ್ಮಥನಿಗೆ ಸರಿಯಾದವನಾಗಿ ಸೀತೆಯೊಡನೆ ಕುಳಿತಿರುವ ಲಕ್ಷ್ಮೀಪತಿಯಾದ ಆ ರಾಮನನ್ನು ನೋಡಿ ಮತ್ತೂ ಕಾಮದಿಂದ ಮೋಹಿತಳಾದಳು ||೩||

ಆ ರಾಕ್ಷಸಿಯೂ ರಾಮನನ್ನು ಕುರಿತು ಕೇಳುವಳು—ನೀನು ಯಾರು ?

ಅಹಂ ಶೂರ್ಪಣಖಾ ನಾಮ ರಾಕ್ಷಸೀ ಕಾಮರೂಪಿಣೀ |
ಭಗಿನೀ ರಾಕ್ಷಸೇಂದ್ರಸ್ಯ ರಾವಣಸ್ಯ ಮಹಾತ್ಮನಃ ||೫||

ಖರೇಣ ಸಹಿತಾ ಭ್ರಾತ್ರಾ ವಸಾಮ್ಯತ್ರೈವ ಕಾನನೆ |
ರಾಜ್ಞಾ ದತ್ತಂ ಚ ಮೆ ಸರ್ವಂ ಮುನಿಭಕ್ಷ್ಯಾ ವಸಾಮ್ಯಹಂ |
ತ್ವಾಂ ತು ವೇದಿತುಮಿಚ್ಛಾಮಿ ವದ ಮೆ ವದತಾಂ ವರ ||೬||

ತಾಮಾಹ ರಾಮನಾಮಾಹಮಯೋಧ್ಯಾಧಿಪತೇಃ ಸುತಃ |
ಏಷಾ ಮೆ ಸುಂದರೀ ಭಾರ್ಯಾ ಸೀತಾ ಜನಕನಂದಿನೀ ||೭||

ಸ ತು ಭ್ರಾತಾ ಕನೀಯಾನ್ಮೆ ಲಕ್ಷ್ಮಣೋತೀವ ಸುಂದರಃ |
ಕಿಂ ಕೃತ್ಯಂ ತೆ ಮಯಾ ಬ್ರೂಹಿ ಕಾರ್ಯಂ ಭುವನಸುಂದರಿ ||೮||

---

ಯಾರಮಗನು ? ಈ ಆಶ್ರಮದಲ್ಲಿ ನಿನಗೇನು ಕೆಲಸ ? ನೀನು ಜಡೆಯಿಂದಲೂ, ನಾರುಬಟ್ಟೆಯಿಂದಲೂ ಕೂಡಿರುವೆ ಇಲ್ಲಿ ನೀನು ಸಾಧಿಸತಕ್ಕದೇನು ಹೇಳು? ||೪||

ನಾನು ಶೂರ್ಪಣಖಿಯೆಂದು ಪ್ರಸಿದ್ಧಳಾದ ಕಾಮರೂಪಿಯಾದ ರಾಕ್ಷಸಿಯು. ರಾಕ್ಷಸರಿಗೆ ಅಧಿಪತಿಯಾದ ಮಹಾತ್ಮನಾದ ರಾವಣನ ತಂಗಿಯು ||೫||

ಭ್ರಾತೃವಾದ ಖರನೊಡನೆ ಕೂಡಿ ಈ ಅರಣ್ಯದಲ್ಲೇ ಇರುವೆನು. ಈ ಅರಣ್ಯವೆಲ್ಲವೂ ರಾಜನಾದ ರಾವಣನಿಂದ ನನಗೆ ಕೊಡಲ್ಪಟ್ಟಿರುವುದು. ಅದುದರಿಂದ ನಾನು ಮುನಿಗಳನ್ನೇ ಭಕ್ಷಿಸುತ್ತಿರುವೆನು. ಎಲೈ ವಕ್ತೃಗಳಿಗೆ ಶ್ರೇಷ್ಠನಾದವನೇ ! ನಿನ್ನ ವೃತ್ತಾಂತವನ್ನು ನಾನು ತಿಳಿಯಲು ಕುತೂಹಲಪಡುತ್ತಿರುವೆನು. ಆದುದರಿಂದ ಹೇಳುವನಾಗು ||೬||

ಎಂದು ಕೇಳಲು, ರಾಮನು ಹೇಳುವನು—ರಾಮನೆಂಬ ಹೆಸರುಳ್ಳ ನಾನು ಅಯೋಧ್ಯಾದಿಪತಿಯ ಮಗನು, ಈ ಹೆಂಗಸು ಜನಕರಾಯನ ಮಗಳಾದ ಸೀತೆಯು ನನ್ನ ಹೆಂಡತಿಯು ||೭||

ಅತ್ಯಂತ ಸುಂದರನಾಗಿ ಹೊರಗಿರುವ ಲಕ್ಷ್ಮಣನು ನನಗೆ ಚಿಕ್ಕ ತಮ್ಮನು, ಎಲೆ ಲೋಕಸುಂದರಿಯೇ, ನನ್ನಿಂದ ನಿನಗೆ ಆಗಬೇಕಾದ ಕಾರ್ಯವು ಯಾವುದೋ ಅದನ್ನು ಹೇಳು ||೮||

ಇತಿ ರಾವಣಃ ಶ್ರುತ್ವಾ ಕಾಮಾರ್ತಾ ಸಾಬ್ರವೀದಿದಂ |
ಏಹಿ ರಾಮ ಮಯಾ ಸಾರ್ಧಂ ರಮಸ್ವ ಗಿರಿಕಾನನೇ |
ಕಾಮಾರ್ತಾಹಂ ನಶಕ್ನೋಮಿ ತ್ಯಕ್ತುಂ ತ್ವಾಂ ಕಮಲೇಕ್ಷಣಂ ||೯||

ರಾಮಃ ಸೀತಾಂ ಕಟಾಕ್ಷೇಣ ಪಶ್ಯಂತ್ಸಸ್ಮಿತಮಬ್ರವೀತ್ |
ಭಾರ್ಯಾ ಮಮೈಷಾಕಲ್ಯಾಣೀ ವಿದ್ಯತೆ ಹ್ಯನಪಾಯಿನೀ |
ತ್ವಂ ತು ಸಾಪತ್ನ್ಯದುಃಖೇನ ಕಥಂ ಸ್ಥಾಸ್ಯಸಿ ಸುಂದರಿ ||೧೦||

ಬಹಿರಾಸ್ತೇ ಮಮ ಭ್ರಾತಾ ಲಕ್ಷ್ಮಣೋತೀವ ಸುಂದರಃ|
ತವಾನುರೂಪೋ ಭವಿತಾ ಪತಿಸ್ತೇನೈವ ಸಂಚರ ||೧೧||

ಇತ್ಯುಕ್ತಾ ಲಕ್ಷ್ಮಣಂ ಪ್ರಾಹ ಪತಿರ್ಮೆ ಭವ ಸುಂದರ |
ಭ್ರಾತುರಾಜ್ಞಾಂ ಪುರಸ್ಕೃತ್ಯ ಸಂಗಚ್ಛಾವೋದ್ಯ ಮಾಚಿರಂ |
ಇತ್ಯಾಹ ರಾಕ್ಷಸೀ ಘೋರಾ ಲಕ್ಷ್ಮಣಂ ಕಾಮಮೋಹಿತಾ ||೧೨||

ಎಂದು ಕೇಳಿದ ರಾಮನಮಾತನ್ನು ಕೇಳಿ ಕಾಮಪೀಡಿತಳಾದ ಆ ರಾಕ್ಷಸಿಯು ಎಲೈ ರಾಮನೇ, ಇತ್ತ ಬಾ ಗಿರಿಯ ಅರಣ್ಯದಲ್ಲಿ ನನ್ನೊಡನೆ ಕ್ರೀಡಿಸು. ಕಾಮಾತುರಳಾದ ನಾನು ಕಮಲದಂತಿರುವ ಕಣ್ಣುಗಳುಳ್ಳ ನಿನ್ನನ್ನು ಬಿಡಲು ಸಮರ್ಥಳಾಗಲಾರೆನು ||೯||

ಎಂದು ಅವಳು ಹೇಳಲು, ಶ್ರೀರಾಮನು ಸೀತೆಯನ್ನು ಕಡೆಗಣ್ಣಿನಿಂದ ನೋಡುತ್ತಾ ನಸುನಗೆಯಿಂದ ಕೂಡಿ ಹ್ಯಾಗೋ ಹಾಗೆ ಹೇಳಿದನು. ನನಗೆ ಶುಭಕರಳಾಗಿ ಶಾಶ್ವತಳಾದ ಈ ಪತ್ನಿಯು ಇರುವಳು, ಆದುದರಿಂದ ಎಲೆ ಸುಂದರಿಯೇ ನೀನು ಸವತಿಯ ದುಃಖದಿಂದ ಹ್ಯಾಗಿರುತ್ತಿ ||೧೦||

ಅತ್ಯಂತ ಸುಂದರನಾದ ನನ್ನ ತಮ್ಮನಾದ ಲಕ್ಷ್ಮಣನು ಹೊರಗಿರುವನು, ಅವನು ನಿನಗೆ ಸರಿಯಾದ ಪತಿಯು, ಅವನೊಡನೆ ನೀನು ಸಂಚಾರವನ್ನು ಮಾಡುವಳಾಗು ||೧೧||

ಎಂದು ಹೇಳಲು, ರಾಕ್ಷಸಿಯು ಲಕ್ಷ್ಮಣನನ್ನು ಕುರಿತು ಎಲೈ ಸುಂದರನೇ! ನೀನು ಅಣ್ಣನಾಜ್ಞೆಯನ್ನು ಪುರಸ್ಕರಿಸಿ ನನಗೆ ಪತಿಯಾಗು, ನಾವಿಬ್ಬರೂ ಜಾಗ್ರತೆಯಾಗಿ ಸೇರೋಣವೆಂದು ಕಾಮಮೋಹಿತಳಾದ ಆ ಘೋರರಾಕ್ಷಸಿಯು ಲಕ್ಷ್ಮಣನಿಗೆ ಹೇಳಿದಳು ||೧೨||

ತಾಮಾಹ ಲಕ್ಷ್ಮಣಸ್ಸಾಧ್ವಿ ದಾಸೋಽಹಂ ತಸ್ಯ ಧೀಮತಃ |
ದಾಸೀ ಭವಿಷ್ಯಸಿ ತ್ವಂತು ತತೋ ದುಃಖತರಂ ನು ಕಿಂ |
ತಮೇವ ಗಚ್ಛ ಭದ್ರಂ ತೇ ಸ ತು ರಾಜಾಖಿಲೇಶ್ವರಃ ||೧೩||

ತಚ್ಛ್ರುತ್ವಾ ಪುನರಪ್ಯಾಗಾದ್ರಾಘವಂ ದುಷ್ಟಮಾನಸಾ |
ಕ್ರೋಧಾದ್ರಾಮ ಕಿಮರ್ಥಂ ಮಾಂ ಭ್ರಾಮಯಸ್ಯನವಸ್ಥಿತಃ ||೧೪||

ಇದಾನೀಮೇವ ತಾಂ ಸೀತಾಂ ಭಕ್ಷಯಾಮಿ ತವಾಗ್ರತಃ |
ಇತ್ಯುಕ್ತ್ವಾ ವಿಕಟಾಕಾರಾ ಜಾನಕೀಮನುಧಾವತೀ ||೧೫||

ತತೋ ರಾಮಾಜ್ಞಯಾ ಖಡ್ಗಮಾದಾಯ ಪರಿಗೃಹ್ಯ ತಾಂ|
ಚಿಚ್ಛೇದ ನಾಸಾಂ ಕರ್ಣೌ ಚ ಲಕ್ಷ್ಮಣೋ ಲಘುವಿಕ್ರಮಃ ||೧೬||

ತತೋ ಘೋರಧ್ವನಿಂ ಕೃತ್ವಾ ರುಧಿರಾಕ್ತವಪುರ್ದ್ರುತಂ !
ಕ್ರಂದಮಾನಾ ಪಪಾತಾಗ್ರೇ ಖರಸ್ಯ ಪರುಷಾಕ್ಷರಾ ||೧೭||

---

ಲಕ್ಷ್ಮಣನು ಅವಳನ್ನು ಕುರಿತು ಎಲ ಸಾಧ್ವಿಯೇ? ಬುದ್ಧಿಶಾಲಿಯಾದ ರಾಮನಿಗೆ ನಾನು ದಾಸನು. ನನ್ನನ್ನು ಸೇರಿದರೆ ನೀನೂ ದಾಸಿಯಾಗುವೆ, ಅದಕ್ಕಿಂತಲೂ ದುಃಖಕರವಾದುದು ಇನ್ನೇನಿರುವುದು. ಆದುದರಿಂದ ಅವನನ್ನೇ ನೀನು ಸೇರು ನಿನಗೆ ಶುಭವಾಗುವುದು. ಅವನು ಸಕಲಕ್ಕೂ ಈಶ್ವರನಾದ ರಾಜನು ||೧೩||

ಎಂದು ಹೇಳಿದ ಲಕ್ಷ್ಮಣನ ಮಾತನ್ನು ಕೇಳಿ ದುಷ್ಟವಾದ ಮನಸ್ಸುಳ್ಳ ಆ ರಾಕ್ಷಸಿಯು ಕೋಪದಿಂದ ಮರಳಿ ರಾಮನಬಳಿಗೆ ಬಂದು ಹೇಳಿದಳು. ಎಲ ರಾಮನೇ, ಯಾಕೆ ಸ್ಥಿರಚಿತ್ತನಾಗದೆ ನನ್ನನ್ನು ಅಲೆಯಿಸುತ್ತೀಯೆ. ಈಗಲೇ ನಿನ್ನೆದುರಿಗೆ ಆ ಸೀತೆಯನ್ನು ಭಕ್ಷಿಸುವೆನು, ಎಂದು ಹೇಳಿ ಜಾನಕಿಯನ್ನು ಅಟ್ಟಿಸಿಕೊಂಡು ಹೋಗುತ್ತ ವಕ್ರವಾದ ಆಕಾರವುಳ್ಳವಳಾದಳು ||೧೪-೧೫||

ಬಳಿಕ ಶೀಘ್ರವಾದ ನಡೆಯುಳ್ಳ ಲಕ್ಷ್ಮಣನು, ರಾಮನ ಆಜ್ಞೆಯಿಂದ ಕತ್ತಿಯನ್ನು ತೆಗೆದು ಅವಳನ್ನು ಹಿಡಿದುಕೊಂಡು ಮೂಗನ್ನೂ, ಕಿವಿಗಳನ್ನೂ ಕತ್ತರಿಸಿದನು ||೧೬||

ಬಳಿಕ ರಕ್ತದಿಂದ ನೆನೆದ ಶರೀರವುಳ್ಳ ಆ ರಾಕ್ಷಸಿಯು ವಿಕಾರವಾಗಿ ಕೂಗಿಕೊಂಡು ಕಠಿನವಾದ ಮಾತನಾಡುತ್ತಾ ಅಳುತ್ತಾ ಜಾಗ್ರತೆಯಾಗಿ ಖರನೆಂಬ ರಾಕ್ಷಸಪತಿಯ ಎದುರಿಗೆ ಬಿದ್ದಳು ||೧೭||

ಕಿಮೇತದಿತಿ ತಾಮಾಹ ಖರ ಖರತರಾಕ್ಷರಃ |
ಕೇನೈವಂ ಕಾರಿತಾ ಸಿತ್ವಂ ಮೃತ್ಯೋರ್ವಕ್ತ್ರಾನುವರ್ತಿನಾ |
ವದ ಮೇ ತಂ ವಧಿಷ್ಯಾಮಿ ಕಾಲಕಲ್ಪಮಪಿ ಕ್ಷಣಾತ್ ||೧೮||

ತಮಾಹ ರಾಕ್ಷಸೀ ರಾಮಃ ಸೀತಾಲಕ್ಷ್ಮಣಸಂಯುತಃ |
ದಂಡಕಂ ನಿರ್ಭಯಂ ಕುರ್ವನ್ನಾಸ್ತೇ ಗೋದಾವರೀತಟೆ ||೧೯||

ಮಾಮೇವಂ ಕೃತವಾಂಸ್ತಸ್ಯ ಭ್ರಾತಾ ತೇನೈವ ಚೋದಿತಃ |
ಯದಿ ತ್ವಂ ಕುಲಜಾತೋಽಸಿ ವೀರೋಽಸಿ ಜಹಿ ತೌ ರಿಪೂ ||೨೦||

ತಯೋಸ್ತು ರುಧಿರಂ ಪಾಸ್ಯೇ ಭಕ್ಷಯ್ಯೆತೌ ಸುದುರ್ಮದೌ |
ನೋಚೇತ್ಪ್ರಾಣಾನ್ಪರಿತ್ಯಜ್ಯ ಯಾಸ್ಯಾಮಿ ಯಮಸಾದನಂ ||೨೧||

ತಚ್ಛ್ರುತ್ವಾ ತ್ವರಿತಂ ಪ್ರಾಗಾತ್ಖರಃ ಕ್ರೋಧೇನ ಮೂರ್ಛಿತಃ |
ಚತುರ್ದಶ ಸಹಸ್ರಾಣಿ ರಕ್ಷಸಾಂ ಭೀಮಕರ್ಮಣಾಂ |
ಚೋದಯಾಮಾಸ ರಾಮಸ್ಯ ಸಮೀಪಂ ವಧಕಾಂಕ್ಷಯಾ ||೨೨||

---

ಅತ್ಯಂತ ಕೋಪಿಷ್ಟನಾದ ಆ ಖರನು ಇದೇನು ? ಮೃತ್ಯುವಿನ ವೇಷವನ್ನು ಅನುಸರಿಸಿರುವ ಯಾವನಿಂದ ನೀನು ಹೀಗೆ ಮಾಡಲ್ಪಟ್ಟಿರುವೆ, ಅವನನ್ನು ನನಗೆ ಹೇಳು. ಕಾಲನಿಗೆ ಸಮಾನನಾದಾಗ್ಯೂ ಅವನನ್ನು ನಾನು ಕ್ಷಣಮಾತ್ರದಲ್ಲಿ ಸಂಹರಿಸುವೆನೆಂದನು ||೧೮||

ರಾಕ್ಷಸಿಯು ಹೇಳುವಳು—ಸೀತಾಲಕ್ಷ್ಮಣಸಮೇತನಾದ ರಾಮನು ದಂಡಕಾರಣ್ಯವನ್ನು ನಿರ್ಭಯವನ್ನಾಗಿ ಮಾಡುತ್ತಾ ಗೋದಾವರೀ ತೀರದಲ್ಲಿರುವನು ||

ಆ ರಾಮನಿಂದ ಪ್ರೇರಿಸಲ್ಪಟ್ಟ ಅವನ ತಮ್ಮನಾದ ಲಕ್ಷ್ಮಣನು ನನಗೆ ಈರೀತಿಯಾಗಿ ಮಾಡಿದನು. ನೀನು ಕುಲದಲ್ಲೇ ಹುಟ್ಟಿದವನಾದರೆ, ಮತ್ತು ವೀರ್ಯವಂತನಾದರೆ ಆ ಶತ್ರುಗಳನ್ನು ಸಂಹರಿಸು ||೨೦||

ಅವರ ರಕ್ತವನ್ನು ನಾನು ಕುಡಿಯುವೆನು. ಅತಿಯಾಗಿ ಕೆಟ್ಟಮದವುಳ್ಳ ಆ ಮನುಷ್ಯರನ್ನು ನಾನು ಭಕ್ಷಿಸುವೆನು. ಹಾಗಲ್ಲದಿದ್ದರೆ ಪ್ರಾಣವನ್ನು ಬಿಟ್ಟು ಯಮನ ಮನೆಯನ್ನು ಸೇರುವೆನು ||೨೧||

ಎಂದು ಅವಳು ಹೇಳಲು, ಆ ಮಾತನ್ನು ಕೇಳಿ ಕೋಪದಿಂದ ಕೂಡಿದ ಖರನು, ಜಾಗ್ರತೆಯಾಗಿ ಹೊರಟು ಭಯಂಕರವಾದ ವ್ಯಾಪಾರವುಳ್ಳ ರಾಕ್ಷಸರ ಹದಿನಾಲ್ಕುಸಾವಿರ ದಂಡನ್ನು ಸಂಹರಿಸಲು ರಾಮನ ಸಮೀಪಕ್ಕೆ ಕಳುಹಿಸಿದನು ||

ಖರಶ್ಚ ತ್ರಿಶಿರಾಶ್ಚೈವ ದೂಷಣಶ್ಚೈವ ರಾಕ್ಷಸಃ |
ಸರ್ವೇ ರಾಮಂ ಯಯುಃ ಶೀಘ್ರಂ ನಾನಾಪ್ರಹರಣೋದ್ಯತಾಃ ||೨೩||

ಶ್ರುತ್ವಾ ಕೋಲಾಹಲಂ ತೇಷಾಂ ರಾಮಃ ಸೌಮಿತ್ರಿಮಬ್ರವೀತ್ |
ಶ್ರೂಯತೇ ವಿಪುಲಃ ಶಬ್ದೋ ನೂನಮಾಯಾಂತಿ ರಾಕ್ಷಸಾಃ ||೨೪||

ಭವಿಷ್ಯತಿ ಮಹದ್ಯುದ್ಧಂ ನೂನಮದ್ಯ ಮಯಾ ಸಹ |
ಸೀತಾಂ ನೀತ್ವಾ ಗುಹಾಂ ಗತ್ವಾ ತತ್ರ ತಿಷ್ಠ ಮಹಾಬಲ ||೨೫||

ಹಂತುಮಿಚ್ಛಾಮ್ಯಹಂ ಸರ್ವಾನ್ ರಾಕ್ಷಸಾನ್ ಘೋರರೂಪಿಣಃ |
ಅತ್ರ ಕಿಂಚಿನ್ನ ವಕ್ತವ್ಯಂ ಶಾಪಿತೋಽಸಿ ಮಮೋಪರಿ ||೨೬||

ತಥೇತಿ ಸೀತಾಮಾದಾಯ ಲಕ್ಷ್ಮಣೋ ಗಹ್ವರಂ ಯಯೌ |
ರಾಮಃ ಪರಿಕರಂ ಬದ್ಧ್ವಾ ಧನುರಾದಾಯ ನಿಷ್ಠುರಂ |
ತೂಣೀರಾವಕ್ಷಯಶರೌ ಬದ್ಧ್ವಾ ಯತ್ತೋಽಭವತ್ಪ್ರಭುಃ ||೨೭||

ತತ ಆಗತ್ಯ ರಕ್ಷಾಂಸಿ ರಾಮಸ್ಯೋಪರಿ ಚಿಕ್ಷಿಪುಃ |
ಆಯುಧಾನಿ ವಿಚಿತ್ರಾಣಿ ಪಾಷಾಣಾನ್ಪಾದಪಾನಪಿ |
ತಾನಿ ಚಿಚ್ಛೇದ ರಾಮೋಽಪಿ ಲೀಲಯಾ ತಿಲಶಃ ಕ್ಷಣಾತ್ ||೨೮||

---

ರಾಕ್ಷಸನಾದ ಖರ, ದೂಷಣ ಸಮಸ್ತ ರಾಕ್ಷಸರೂ ಸಹ ನಾನಾವಿಧವಾದ ಆಯುಧಗಳನ್ನು ಹಿಡಿದು ರಾಮನ ಸಮೀಪವನ್ನು ಸೇರಿದರು ||೨೩||

ರಾಮನು ಅವರ ಕೋಲಾಹಲವನ್ನು ಕೇಳಿ, ಎಲೈ ಲಕ್ಷ್ಮಣನೇ! ಅಧಿಕವಾದ ಶಬ್ದವು ಕೇಳಿಸುತ್ತಿದೆ. ನಿಶ್ಚಯವಾಗಿಯೂ ರಾಕ್ಷಸರು ಬರುತ್ತಿರುವರು ||

ಈಗ ನನಗೂ ಅವರಿಗೂ ಘೋರವಾದ ಯುದ್ಧವು ನಿಶ್ಚಯವಾಗಿಯೂ ಆಗುವುದು. ಎಲೈ ಮಹಾಬಲನಾದ ಲಕ್ಷ್ಮಣನೆ, ನೀನು ಸೀತೆಯನ್ನು ಗುಹೆಯಲ್ಲಿರಿಸಿ ನೀನು ಅಲ್ಲಿಯೇ ಇರು ||೨೫||

ಭಯಂಕರಾಕಾರವುಳ್ಳ ಸಮಸ್ತ ರಾಕ್ಷಸರನ್ನೂ ನಾನೇ ಸಂಹರಿಸುವೆನು. ಈ ವಿಷಯದಲ್ಲಿ ನೀನು ಏನೂ ಹೇಳಕೂಡದು ||೨೬||

ಎನಲು, ಲಕ್ಷ್ಮಣನು ಹಾಗೆಯೇ ಆಗಲೆಂದು ಸೀತೆಯನ್ನು ಕರೆದುಕೊಂಡು ಗುಹೆಯನ್ನು ಸೇರಿದನು. ಜಗತ್ಪ್ರಭುವಾದ ರಾಮನು ಯುದ್ಧದುಡಿಗೆಯನ್ನು ಧರಿಸಿ ಅಕ್ಷಯವಾದ ಬಾಣಗಳುಳ್ಳ ಬತ್ತಳಿಕೆಯನ್ನು ಕಟ್ಟಿಕೊಂಡು ಸಿದ್ಧನಾದನು ||೨೭||

ಬಳಿಕ ರಾಕ್ಷಸರು ಬಂದು ರಾಮನಮೇಲೆ ವಿಚಿತ್ರವಾದ ಶಸ್ತ್ರಗಳನ್ನೂ

ತತೋ ಬಾಣಸಹಸ್ರೇಣ ಹತ್ವಾ ತಾನ್ ಸರ್ವರಾಕ್ಷಸಾನ್ |
ಖರಂ ತ್ರಿಶಿರಸಂ ಚೈವ ದೂಷಣಂ ಚೈವ ರಾಕ್ಷಸಃ |
ಜಘಾನ ಪ್ರಹರಾರ್ಧೇನ ಸರ್ವಾನೇವ ರಘೂತ್ತಮಃ ||೨೯||

ಲಕ್ಷ್ಮಣೋಽಪಿ ಗುಹಾಮಧ್ಯಾತ್ಸೀತಾಮಾದಾಯ ರಾಘವೇ |
ಸಮರ್ಪ್ಯ ರಾಕ್ಷಸಾನ್ದೃಷ್ಟ್ವಾ ಹತಾನ್ವಿಸ್ಮಯಮಾಯಯೌ ||೩೦||

ಸೀತಾ ರಾಮಂ ಸಮಾಲಿಂಗ್ಯ ಪ್ರಸನ್ನಮುಖಪಂಕಜಾ |
ಶಸ್ತ್ರವ್ರಣಾನಿ ಚಾಂಗೇಷು ಮಮಾರ್ಜ ಜನಕಾತ್ಮಜಾ ||೩೧||

ಸಾಪಿ ದುದ್ರಾವ ದೃಷ್ಟ್ವಾ ತಾನ್ ಹತಾನ್ರಾಕ್ಷಸಪುಂಗವಾನ್ |
ಲಂಕಾಂ ಗತ್ವಾ ಸಭಾಮಧ್ಯೇ ಕ್ರೋಶಂತೀ ಪಾದಸನ್ನಿಧೌ |
ರಾವಣಸ್ಯ ಪಪಾತೋರ್ವ್ಯಾಂ ಭಗಿನೀ ತಸ್ಯ ರಕ್ಷಸಃ ||೩೨||

ದೃಷ್ಟ್ವಾ ತಾಂ ರಾವಣಃ ಪ್ರಾಹ ಭಗಿನೀಂ ಭಯವಿಹ್ವಲಾಂ |
ಉತ್ತಿಷ್ಠೋತ್ತಿಷ್ಠ ವತ್ಸೇ ತ್ವಂ ವಿರೂಪಕರಣಂ ತವ ||೩೩||

---

ಕಲ್ಲುಗಳನ್ನೂ, ಮರಗಳನ್ನೂ ಎಸೆದರು. ಶ್ರೀರಾಮನು ಲೀಲೆಯಿಂದ ಅವುಗಳನ್ನು ಕ್ಷಣಮಾತ್ರದಲ್ಲಿ ಕತ್ತರಿಸಿದನು ||೨೮||

ಸಾವಿರಾರು ಬಾಣದಿಂದ ಸಮಸ್ತ ರಾಕ್ಷಸರನ್ನೂ ಹೊಡೆದು ರಾಕ್ಷಸನಾದ ಖರನನ್ನೂ, ತ್ರಿಶಿರನನ್ನೂ, ದೂಷಣನನ್ನೂ ಹೊಡೆದನು, ಅರ್ಧಯಾಮದಲ್ಲಿ ಎಲ್ಲಾ ರಾಕ್ಷಸರನ್ನೂ ರಘೂತ್ತಮನು ಸಂಹರಿಸಿದನು ||೨೯||

ಬಳಿಕ ಲಕ್ಷ್ಮಣನು ಗುಹೆಯಿಂದ ಸೀತೆಯನ್ನು ಕರೆತಂದು ಶ್ರೀರಾಮನಿಗೆ ಒಪ್ಪಿಸಿ, ಹೊಡೆಯಲ್ಪಟ್ಟಿರುವ ರಾಕ್ಷಸರನ್ನು ನೋಡಿ ಆಶ್ಚರ್ಯಪಟ್ಟನು ||೩೦||

ಜನಕನಮಗಳಾದ ಸೀತೆಯು ನಗೆಮೊಗದಿಂದ ರಾಮನನ್ನು ತಬ್ಬಿಕೊಂಡು ಶರೀರದಲ್ಲಿರುವ ಬಾಣದ ಘಾಯಗಳನ್ನು ಒರಸಿದಳು ||೩೧||

ಆ ಶೂರ್ಪಣಖಿಯು, ರಾಮನಿಂದ ಹೊಡೆಯಲ್ಪಟ್ಟಿರುವ ರಾಕ್ಷಸರನ್ನು ನೋಡಿ ಓಡುತ್ತಾ ಲಂಕಾಪಟ್ಟಣವನ್ನು ಸೇರಿ ಸಭೆಯ ಮಧ್ಯದಲ್ಲಿ ಕೂಗಿಕೊಳ್ಳುತ್ತಾ ರಾವಣನ ಪಾದದ ಸಮೀಪದಲ್ಲಿ ನೆಲದಮೇಲೆ ಬಿದ್ದಳು ||೩೨||

ರಾವಣನು ಭಯದಿಂದ ಕೂಡಿರುವ ತಂಗಿಯನ್ನು ನೋಡಿ ಎಲೌ ಹುಡುಗಿಯೇ, ನೀನು ಏಳು, ನಿನ್ನ ರೂಪವಿಕಾರವು ||೩೩||

ಕೃತಂ ಶಕ್ರೇಣ ವಾ ಭದ್ರೆ ಯಮೇನ ವರುಣೇನ ವಾ |
ಕುಬೇರೇಣಾಥವಾ ಬ್ರೂಹಿ ಭಸ್ಮೀಕುರ್ಯಾಂ ಕ್ಷಣೇನ ತಂ ||೧೪||

ರಾಕ್ಷಸೀ ತಮುವಾಚೇದಂ ತ್ವಂ ಪ್ರಮತ್ತೋ ವಿಮೂಢಧೀಃ !
ಪಾನಾಸಕ್ತಃ ಸ್ತ್ರೀವಿಜಿತಃ ಷಂಡಃ ಸರ್ವತ್ರ ಲಕ್ಷ್ಯಸೇ |
ಚಾರಚಕ್ಷುರ್ವಿಹೀನಸ್ತ್ವಂ ಕಥಂ ರಾಜಾ ಭವಿಷ್ಯಸಿ ||೧೫||

ಖರಶ್ಚ ನಿಹತಃ ಸಂಖ್ಯೇ ದೂಷಣಸ್ತ್ರಿಶಿರಾಸ್ತಥಾ |
ಚತುರ್ದಶ ಸಹಸ್ರಾಣಿ ರಾಕ್ಷಸಾನಾಂ ಮಹಾತ್ಮನಾಂ |
ನಿಹತಾನಿ ಕ್ಷಣೇನೈವ ರಾಮೇಣಾಸುರಶತ್ರುಣಾ ||೧೬||

ಜನಸ್ಥಾನಮಶೇಷೇಣ ಮುನೀನಾಂ ನಿರ್ಭಯಂ ಕೃತಂ |
ನ ಜಾನಾಸಿ ವಿಮೂಢಸ್ತ್ವಮತ ಏವ ಮಯೋಚ್ಯತೇ ||೧೭||

ರಾವಣಃ ||

ಕೋ ವಾ ರಾಮಃ ಕಿಮರ್ಥಂ ವಾ ಕಥಂ ತೇನಾಸುರಾ ಹತಾಃ |
ಸಮ್ಯಕ್ಕಥಯ ಮೇ ತೇಷಾಂ ಮೂಲಘಾತಂ ಕರೋಮ್ಯಹಂ ||೧೮||

---

ಇಂದ್ರನಿಂದ ಮಾಡಲ್ಪಟ್ಟಿತೋ, ಅಥವಾ ಯಮನಿಂದಲೋ, ವರುಣನಿಂದಲೋ, ಕುಬೇರನಿಂದಲೋ, ಎಲೌ ಶುಭಾಂಗಿಯೇ ಹೇಳು, ಅವನನ್ನು ಕ್ಷಣಮಾತ್ರದಲ್ಲಿ ಭಸ್ಮಮಾಡುವೆನು ||೧೪||

ಎಂದು ರಾವಣನು ಹೇಳಲು, ಶೂರ್ಪಣಖಿಯು ಎಲಾ ರಾವಣನೇ, ನೀನು ಪಾನದಲ್ಲಾಸಕ್ತನಾಗಿ ಸ್ತ್ರೀಯರುಗಳಿಂದ ಜಯಿಸಲ್ಪಟ್ಟಿರುವೆಯಾದಕಾರಣ ಮೂಢಬುದ್ಧಿಯುಳ್ಳವನಾಗಿ ಎಚ್ಚರವಿಲ್ಲದವನಾಗಿರುವೆ. ಮತ್ತು ಎಲ್ಲಾ ವ್ಯಾಪಾರದಲ್ಲೂ ನಪುಂಸಕನಾಗಿರುವೆ ಚಾರರೆಂಬ ಕಣ್ಣಿಲ್ಲದ ನೀನು ರಾಯನೆಂತಾಗುವೆ ||೧೫||

ಯುದ್ಧದಲ್ಲಿ ಖರನು ಸಂಹೃತನಾದನು, ದೂಷಣನೂ, ತ್ರಿಶಿರನೂ, ಕೂಡ ಹಾಗೆಯೇ ಹತರಾದರು ಮಹತ್ತಾದ ಶರೀರವುಳ್ಳ ಹದಿನಾಲ್ಕುಸಾವಿರ ರಾಕ್ಷಸರು ಅಸುರರಿಗೆ ಶತ್ರುವಾದ ರಾಮನಿಂದ ಕ್ಷಣಮಾತ್ರದಲ್ಲಿ ಹತರಾದರು ||೧೬||

ಜನಸ್ಥಾನವು ಸಾಕಲ್ಯವಾಗಿ ಮುನಿಗಳಿಗೆ ನಿರ್ಭಯವಾಗಿ ಮಾಡಲ್ಪಟ್ಟಿತು, ಮೂಢನಾದ ನೀನು ಅದನ್ನು ತಿಳಿಯಲಾರೆಯಾದಕಾರಣ ಹೇಳುವೆನು ||೧೭||

ಎಂದು ಶೂರ್ಪಣಖಿಯು ಹೇಳಲು, ರಾವಣನು ರಾಮನು ಯಾವನು? ಏನು

ಶೂರ್ಪಣಖಾ ||

ಜನಸ್ಥಾನಾದಹಂ ಯಾತಾ ಕದಾಚಿದ್ಗೌತಮೀತಟೇ |
ತತ್ರ ಪಂಚವಟೀ ನಾಮ ಪುಣ್ಯಾ ಮುನಿಜನಾಶ್ರಯಾ ||೩೯||

ತತ್ರಾಶ್ರಮೇ ಮಯಾ ದೃಷ್ಟೋ ರಾಮೋ ರಾಜೀವಲೋಚನಃ |
ಧನುರ್ಬಾಣಧರಃ ಶ್ರೀಮಾನ್ ಜಟಾವಲ್ಕಲಮಂಡಿತಃ ||೪೦||

ಕನೀಯಾನನುಜಸ್ತಸ್ಯ ಲಕ್ಷ್ಮಣೋಽಪಿ ತಥಾವಿಧಃ |
ತಸ್ಯ ಭಾರ್ಯಾ ವಿಶಾಲಾಕ್ಷೀ ರೂಪಿಣೀ ಶ್ರೀರಿವಾಪರಾ ||೪೧||

ದೇವಗಂಧರ್ವನಾಗಾನಾಂ ಮನುಷ್ಯಾಣಾಂ ತಥಾವಿಧಾ |
ನ ದೃಷ್ಟಾ ನ ಶ್ರುತಾ ರಾಜನ್ದ್ಯೋತಯಂತೀ ವನಂ ಶುಭಾ ||೪೨||

ಆನೇತುಮಹಮುದ್ಯುಕ್ತಾ ತಾಂ ಭಾರ್ಯಾರ್ಥಂ ತವಾನಘ |
ಲಕ್ಷ್ಮಣೋ ನಾಮ ತದ್ಭ್ರಾತಾ ಚಿಚ್ಛೇದ ಮಮ ನಾಸಿಕಾಂ ||೪೩||

ಕಾರಣ ಅವನಿಂದ ಸುರರು ಕೊಲ್ಲಲ್ಪಟ್ಟರು ? ಇದನ್ನು ಚನ್ನಾಗಿ ನನಗೆ ಹೇಳು, ಅವರ ಮೂಲವನ್ನೇ ನಾನು ಕತ್ತರಿಸುವೆನು ||೩೮||

ಎಂದು ರಾವಣನು ಹೇಳಲು, ಶೂರ್ಪಣಖಿಯು ಒಂದುದಿನ ನಾನು ಜನಸ್ಥಾನದಿಂದ ಹೊರಟೆನು. ಅಲ್ಲಿ ಗೋದಾವರಿಯ ದಡದಲ್ಲಿ ಪೂರ್ವದಲ್ಲಿ ಮುನಿಗಳಿಗೆ ಆಶ್ರಯವಾಗಿದ್ದ ಪಂಚವಟಿಯೆಂಬ ಕ್ಷೇತ್ರವು ಇರುವುದು ||೩೯||

ಆ ಆಶ್ರಮದಲ್ಲಿ ಜಡೆಗಳಿಂದಲೂ, ನಾರುಬಟ್ಟೆಗಳಿಂದಲೂ, ಅಲಂಕೃತನಾಗಿ ಧನುರ್ಬಾಣಧರನಾಗಿ ತಾವರೆಯ ದಳದಂತೆ ಕಣ್ಣುಗಳುಳ್ಳ ಶ್ರೀಮಂತನಾದ ರಾಮನನ್ನು ನೋಡಿದೆನು ||೪೦||

ಅವನ ಚಿಕ್ಕ ತಮ್ಮನಾದ ಲಕ್ಷ್ಮಣನು ಅವನಂತೆಯೇ ಇರುವನು, ಆ ರಾಮನಿಗೆ ಹೆಂಡತಿಯಾದ ಸೀತೆಯು ವಿಶಾಲವಾದ ಕಣ್ಣುಳ್ಳವಳಾಗಿ ಎರಡನೇ ಲಕ್ಷ್ಮಿಯಂತೆ ರೂಪವತಿಯಾಗಿರುವಳು ||೪೧||

ಎಲೈ ಅರಸೇ ? ದೇವಗಂಧರ್ವಕನ್ಯೆಯರೊಳಗೂ, ಮನುಷ್ಯನಾರಿಯರೊಳಗೂ ವನವನ್ನು ಬೆಳಕುಮಾಡುವ ಶುಭಳಾದ ಸುಂದರಿಯನ್ನು ನಾನು ನೋಡಿಯೂ ಇಲ್ಲ, ಕೇಳಿಯೂ ಇಲ್ಲ ||೪೨||

ಎಲೈ ಪುಣ್ಯವಂತನೇ, ನಿನಗೆ ಹೆಂಡತಿಯನ್ನಾಗಿ ಮಾಡಲೋಸುಗ ಅವಳನ್ನು

ಕರ್ಣೌ ಚ ನೋದಿತಸ್ತೇನ ರಾಮೇಣ ಸ ಮಹಾಬಲಃ |
ತತೋಽಹಮತಿದುಃಖೇನ ರುದಂತೀ ಖರಮನ್ವಗಾಂ ||೪೪||

ಸೋಽಪಿ ರಾಮಂ ಸಮಾಸಾದ್ಯ ಯೋದ್ಧುಂ ರಾಕ್ಷಸಯೂಥಪೈಃ |
ಹತಃ ಕ್ಷಣೇನ ರಾಮೇಣ ತೇನೈವ ಬಲಶಾಲಿನಾ |
ಸರ್ವೇ ತೇನ ವಿನಷ್ಟಾ ವೈ ರಾಕ್ಷಸಾ ಭೀಮವಿಕ್ರಮಾಃ ||೪೫||

ಯದಿ ರಾಮೋ ಮನಃ ಕುರ್ಯಾತ್ತ್ರೈಲೋಕ್ಯಂ ನಿಮಿಷಾರ್ಧತಃ |
ಭಸ್ಮೀಕುರ್ಯಾನ್ನ ಸಂದೇಹ ಇತಿ ಭಾತಿ ಮಮ ಪ್ರಭೋ ||೪೬||

ಯದಿ ಸಾ ತವ ಭಾರ್ಯಾ ಸ್ಯಾತ್ಸಫಲಂ ತವ ಜೀವಿತಂ |
ಅತೋ ಯತಸ್ವ ರಾಜೇಂದ್ರ ಯಥಾ ತೇ ವಲ್ಲಭಾ ಭವೇತ್ |
ಸೀತಾ ರಾಜೀವಪತ್ರಾಕ್ಷೀ ಸರ್ವಲೋಕೈಕಸುಂದರೀ ||೪೭||

ಸಾಕ್ಷಾದ್ರಾಮಸ್ಯ ಪುರತಃ ಸ್ಥಾತುಂ ತ್ವಂ ನ ಕ್ಷಮಃ ಪ್ರಭೋ |
ಮಾಯಯಾ ಮೋಹಯಿತ್ವಾ ತು ಪ್ರಾಪ್ಸ್ಯಸೆ ತಾಂ ರಘೂತ್ತಮಂ ||೪೮||

---

ನಾನು ತರಲು ಉದ್ಯುಕ್ತನಾದೆನು. ಅವನ ತಮ್ಮನಾದ ಲಕ್ಷ್ಮಣನು ನನ್ನ ಮೂಗನ್ನು ಕತ್ತರಿಸಿದನು ||೪೩||

ಮತ್ತೆ ರಾಮನಿಂದ ಪ್ರೇರಿತನಾಗಿ ನನ್ನ ಕಿವಿಗಳನ್ನು ಕತ್ತರಿಸಿದನು. ಬಳಿಕ ಅತಿ ದುಃಖದಿಂದ ಅಳುತ್ತಾ ನಾನು ಖರನ ಸಮೀಪವನ್ನು ಸೇರಿದೆನು ||೪೪||

ಅವನು ರಾಕ್ಷಸಸೇನಾಪತಿಗಳೊಡನೆ ರಾಮನಮೇಲೆ ಯುದ್ಧಮಾಡಲೋಸುಗ ಹೊರಟು ಬಲಶಾಲಿಯಾದ ರಾಮನಿಂದ ಕ್ಷಣಮಾತ್ರದಲ್ಲಿ ಸಂಹರಿಸಲ್ಪಟ್ಟನು. ಭಯಂಕರ ಪರಾಕ್ರಮಿಗಳಾದ ರಾಕ್ಷಸರೆಲ್ಲರೂ ಅವನಿಂದ ಹತರಾದರು ||೪೫||

ಎಲೈ ಪ್ರಭುವೇ, ರಾಮನು ಮನಸ್ಸುಮಾಡಿದರೆ ಮೂರುಲೋಕಗಳನ್ನೂ ಭಸ್ಮಮಾಡುವನು ಇದರಲ್ಲಿ ಸಂಶಯವಿಲ್ಲವೆಂದು ನನಗೆ ತೋರುತಲಿದೆ ||೪೬||

ಸೀತೆಯು ನಿನಗೆ ಹೆಂಡತಿಯಾದರೆ ನಿನ್ನ ಬದುಕು ಸಫಲವಾಗುವುದು. ಆದಕಾರಣ ಎಲೈ ರಾಜೇಂದ್ರನೇ, ಕಮಲದಳಾಕ್ಷಿಯಾದ, ಜಗದೇಕಸುಂದರಿಯಾದ ಅವಳು ಹ್ಯಾಗೆ ನಿನಗೆ ಹೆಂಡತಿಯಾಗುವಳೋ ಹಾಗೆ ನೀನು ಪ್ರಯತ್ನವನ್ನು ಮಾಡು ||೪೭||

ಎಲೈ ಪ್ರಭುವೇ, ನೀನು ರಾಮನೆದುರಿಗೆ ಪ್ರತ್ಯಕ್ಷವಾಗಿ ನಿಲ್ಲುವುದಕ್ಕೆ

ಶ್ರುತ್ವಾ ತತ್ಸೂಕ್ತವಾಕ್ಯೈಶ್ಚ ದಾನಮಾನಾದಿಭಿಸ್ತಥಾ |
ಆಶ್ವಾಸ್ಯ ಭಗಿನೀಂ ರಾಜಾ ಪ್ರವಿವೇಶ ಸ್ವಕಂ ಗೃಹಂ |
ತತ್ರಚಿಂತಾಪರೋ ಭೂತ್ವಾ ರಾತ್ರೌ ನಿದ್ರಾಂ ನ ಲಬ್ಧವಾನ್ ॥೪೯॥

ಏಕೇನ ರಾಮೇಣ ಕಥಂ ಮನುಷ್ಯಮಾತ್ರೇಣ ನಷ್ಟಃ ಸಬಲಃ ಖರೋ ಮೇ |
ಭ್ರಾತಾ ಕಥಂ ಮೇ ಬಲವೀರ್ಯದರ್ಪಯುತೋ ವಿನಷ್ಟೋ ಬತ ರಾಘವೇಣ ॥

ಯದ್ವಾ ನ ರಾಮೋ ಮನುಜಃ ಪರೇಶೋ ಮಾಂ ಹಂತುಕಾಮಃ ಸಬಲಂ ಬಲೌಘೈಃ |
ಸಂಪ್ರಾರ್ಥಿತೋಽಯಂ ದ್ರುಹಿಣೇನ ಪೂರ್ವಂ ಮನುಷ್ಯರೂಪೋಽದ್ಯ ರಘೋಃ ಕುಲೇಽಭೂತ್ ॥೫೧॥

ವಧ್ಯೋ ಯದಿ ಸ್ಯಾಂ ಪರಮಾತ್ಮನಾಹಂ ವೈಕುಂಠರಾಜ್ಯಂ ಪರಿಪಾಲಯೇಽಹಂ |
ನೋ ಚೇದಿದಂ ರಾಕ್ಷಸರಾಜ್ಯಮೇವ ಭೋಕ್ಷ್ಯೇ ಚಿರಂ ರಾಮಮತೋ ವ್ರಜಾಮಿ ॥೫೨॥

---

ಸಮರ್ಥನಲ್ಲ. ಆದುದರಿಂದ ರಾಮನನ್ನು ಮೋಹಗೊಳಿಸಿ ಆ ಸೀತೆಯನ್ನು ಪಡೆ ॥

ಆ ಮಾತನ್ನು ಕೇಳಿ ರಾಜನಾದ ರಾವಣನು ಒಳ್ಳೆಯ ಮಾತುಗಳಿಂದಲೂ, ದಾನಸನ್ಮಾನಾದಿಗಳಿಂದಲೂ, ತಂಗಿಯನ್ನು ಸಮಾಧಾನಪಡಿಸಿ ತನ್ನ ಮನೆಯನ್ನು ಸೇರಿ ಅಲ್ಲಿ ಆಲೋಚನೆಯಲ್ಲೇ ಆಸಕ್ತನಾಗಿ ರಾತ್ರಿಯೆಲ್ಲ ನಿದ್ರೆಬಾರದೆ ಈ ರೀತಿ ಯೋಚಿಸಿದನು ॥೪೯॥

ನನ್ನ ಸೇನೆಯಿಂದಲೂ, ದೇಹಬಲದಿಂದಲೂ, ಗರ್ವಿತನಾದ ನನ್ನ ತಮ್ಮನು ರಾಘವನಿಂದ ನಾಶವಾದನಲ್ಲವೇ ? ಬಲಶಾಲಿಯಾದ ಆ ಖರನು ಮನುಷ್ಯಮಾತ್ರನಾದ ಅದ್ವಿತೀಯನಾದ ರಾಮನಿಂದ ಹ್ಯಾಗೆ ಹತನಾದನು ? ॥೫೦॥

ಅಥವಾ ರಾಮನು ಮನುಷ್ಯನಲ್ಲ, ಪ್ರಭುವಾದ ನಾರಾಯಣನು. ಪೂರ್ವದಲ್ಲಿ ಬ್ರಹ್ಮನಿಂದ ಪ್ರಾರ್ಥಿತನಾಗಿ ಬಲಸಮೂಹಗಳೊಡನೆ ಬಲಿಷ್ಠನಾದ ನನ್ನನ್ನು ಸಂಹರಿಸಲಿಚ್ಛೆಯುಳ್ಳವನಾಗಿ ಈಗ ಮನುಷ್ಯರೂಪನಾಗಿ ರಘುಮಹಾರಾಜನ ಕುಲದಲ್ಲಿ ಹುಟ್ಟಿರುವನು ॥೫೧॥

ನಾನು ಆ ಪರಮಾತ್ಮನಿಂದ ವಧಿಸಲು ಯೋಗ್ಯನಾದರೆ ವೈಕುಂಠದ ರಾಜ್ಯ

ಇತ್ಥಂ ವಿಚಿಂತ್ಯಾಖಿಲರಾಕ್ಷಸೇಂದ್ರೋ ರಾಮಂ ವಿದಿತ್ವಾ ಪರಮೇ
ಶ್ವರಂ ಹರಿಂ |
ವಿರೋಧಬುದ್ಧ್ಯೈವ ಹರಿಂ ಪ್ರಯಾಮಿ ದ್ರುತಂ ನ ಭಕ್ತ್ಯಾ ಭಗ
ವಾನ್ಪ್ರಸೀದೇತ್ ||೫೩||

|| ಪಂಚಮಸ್ಸರ್ಗಃ ಸಮಾಪ್ತಃ ||



---

ವನ್ನೇ ರಕ್ಷಿಸುವೆನು. ಅವನ ಹೊಡೆತದಿಂದ ಈ ಶರೀರವು ಹೋದರೆ ನಾನೇ ವಿಷ್ಣು ವಾಗುವೆನೆಂದು ತಾತ್ಪರ್ಯ. ಹಾಗಲ್ಲದಿದ್ದರೆ ಈ ರಾಕ್ಷಸರಾಜ್ಯವನ್ನೇ ಪಾಲಿಸಬೇಕು. ಬಹುಕಾಲದಿಂದ ಇದನ್ನು ಅನುಭವಿಸುತ್ತಲೇ ಇರುವೆನಾದಕಾರಣ ರಾಮನನ್ನು ಸೇರುವೆನು ||೫೨||

ಎಂದು ಆಲೋಚಿಸಿ ಸಮಸ್ತ ರಾಕ್ಷಸ ಪ್ರಭುವಾದ ರಾವಣನು ಶ್ರೀರಾಮನನ್ನು ಪರಮೇಶ್ವರನಾದ ಹರಿಯೆಂದು ತಿಳಿದು ಭಕ್ತಿಯಿಂದ ಆ ಭಗವಂತನು ಜಾಗ್ರತೆಯಾಗಿ ಪ್ರಸನ್ನನಾಗುವುದಿಲ್ಲವಾದಕಾರಣ ವಿರೋಧದಿಂದಲೇ ಆ ಶ್ರೀಹರಿಯನ್ನು ಸೇರುವೆನೆಂದು ನಿಶ್ಚಯಿಸಿದನು ||೫೩||

|| ಇಲ್ಲಿಗೆ ಐದನೆಯ ಸರ್ಗವು ಮುಗಿದುದು ||



# ಷಷ್ಠಸ್ಸರ್ಗಃ.

ಶ್ರೀ ಮಹಾದೇವಃ ||

ವಿಚಿಂತ್ಯೈವಂ ನಿಶಾಯಾಂ ಸ ಪ್ರಭಾತೇ ರಥಮಾಸ್ಥಿತಃ |
ರಾವಣೋ ಮನಸಾ ಕಾರ್ಯಮೇಕಂ ನಿಶ್ಚಿತ್ಯ ಬುದ್ಧಿಮಾನ್ |
ಯಯೌ ಮಾರೀಚಸದನಂ ಪರಂ ಪಾರಮುದನ್ವತಃ ||೧||

ಮಾರೀಚಸ್ತತ್ರ ಮುನಿವಜ್ಜಟಾವಲ್ಕಲಧಾರಕಃ |
ಧ್ಯಾಯನ್ ಹೃದಿ ಪರಾತ್ಮಾನಂ ನಿರ್ಗುಣಂ ಗುಣಭಾಸಕಂ |
ಸಮಾಧಿವಿರಮೇಽಪಶ್ಯದ್ರಾವಣಂ ಗೃಹಮಾಗತಂ ||೨||

ದ್ರುತಮುತ್ಥಾಯ ಚಾಲಿಂಗ್ಯ ಪೂಜಯಿತ್ವಾ ಯಥಾವಿಧಿ |
ಕೃತಾತಿಥ್ಯಂ ಸುಖಾಸೀನಂ ಮಾರೀಚೋ ವಾಕ್ಯಮಬ್ರವೀತ್ ||೩||

ಕಿಮಾಗಮನಮೇತತ್ತೇ ರಥೇನೈಕೇನ ರಾವಣ |
ಚಿಂತಾಪರ ಇವಾಭಾಸಿ ಹೃದಿ ಕಾರ್ಯಂ ವಿಚಿಂತಯನ್ ||೪||

---

ಶ್ರೀ ಪರಮೇಶ್ವರನು ಪಾರ್ವತಿಗೆ ಹೇಳುವನು ||

ಈ ಪ್ರಕಾರ ರಾತ್ರಿಯೆಲ್ಲಾ ಯೋಚಿಸಿದ ರಾವಣನು ಬೆಳಗಾದಮೇಲೆ ಬುದ್ಧಿವಂತನಾದುದರಿಂದ ಮನಸ್ಸಿನಲ್ಲಿ ಒಂದು ಕಾರ್ಯವನ್ನು ನಿಶ್ಚಯಿಸಿ, ರಥವನ್ನೇರಿ ಸಮುದ್ರಕ್ಕೆ ಕೊನೆಯ ದಡವಾದ ಮಾರೀಚನ ಮನೆಯನ್ನು ಸೇರಿದನು ||೧||

ಮಾರೀಚನು ಅಲ್ಲಿ ಮುನಿಯಂತೆ ಜಡೆಯನ್ನೂ, ನಾರುಬಟ್ಟೆಗಳನ್ನೂ ಧರಿಸಿ ನಿರ್ಗುಣನಾಗಿ ಗುಣಪ್ರಕಾಶಕನಾದ ಪರಮಾತ್ಮನನ್ನು ಧ್ಯಾನಿಸುತ್ತಾ ಸಮಾಧಿಗವಸಾನದಲ್ಲಿ ತನ್ನ ಮನೆಗೆ ಬಂದಿರುವ ರಾವಣನನ್ನು ಕಂಡನು ||೨||

ಮಾರೀಚನು ಜಾಗ್ರತೆಯಾಗಿ ಎದ್ದು ಆಲಂಗಿಸಿ ಯಥಾವಿಧಿಯಾಗಿ ಪೂಜಿಸಿ ಆತಿಥ್ಯವನ್ನು ಮಾಡಿ ಸುಖವಾಗಿ ಕುಳಿತಿರುವ ಆ ರಾವಣನೊಡನೆ ಮಾತನಾಡಿದನು ||

ಎಲೈ ರಾವಣನೇ, ಒಂದೇ ರಥದಿಂದ ಒಂಟಿಯಾಗಿ ನೀನು ಬಂದ ಕಾರಣ ವೇನು ? ನೀನು ಮನಸ್ಸಿನಲ್ಲಿ ಯಾವುದನ್ನೋ ಯೋಚಿಸುತ್ತಿರುವುದರಿಂದ ಚಿಂತಾಪರನಂತೆ ಕಾಣುವೆ ||೪||

ಬ್ರೂಹಿ ಮೆ ನಹಿ ಗೋಪ್ಯಂ ಚೇತ್ಕರವಾಣಿ ತವ ಪ್ರಿಯಂ |
ನ್ಯಾಯ್ಯಂ ಚೇದ್ಬ್ರೂಹಿ ರಾಜೇಂದ್ರ ವೃಜಿನಂ ಮಾಂ ಸ್ಪೃಶೇನ್ನಹಿ ||೫||

ರಾವಣಃ ||

ಅಸ್ತಿ ರಾಜಾ ದಶರಥಃ ಸಾಕೇತಾಧಿಪತಿಃ ಕಿಲ |
ರಾಮ ನಾಮಾ ಸುತಸ್ತಸ್ಯ ಜ್ಯೇಷ್ಠಃ ಸತ್ಯಪರಾಕ್ರಮಃ ||೬||

ವಿವಾಸಯಾಮಾಸ ಸುತಂ ವನಂ ವನಜನಪ್ರಿಯಂ |
ಭಾರ್ಯಯಾ ಸಹಿತಂ ಭ್ರಾತ್ರಾ ಲಕ್ಷ್ಮಣೇನ ಸಮನ್ವಿತಂ ||೭||

ಸ ಆಸ್ತೆ ವಿಪಿನೆ ಘೋರೆ ಪಂಚವಟ್ಯಾಶ್ರಮೆ ಶುಭೆ |
ತಸ್ಯ ಭಾರ್ಯಾ ವಿಶಾಲಾಕ್ಷೀ ಸೀತಾ ಲೋಕವಿಮೋಹಿನೀ ||೮||

ರಾಮೊ ನಿರಪರಾಧಾನ್ಮೇ ರಾಕ್ಷಸಾನ್ಭೀಮವಿಕ್ರಮಾನ್ |
ಖರಂ ಚ ಹತ್ವಾ ವಿಪಿನೆ ಸುಖಮಾಸ್ತೇತಿನಿರ್ಭಯಃ ||೯||

---

ಗೋಪ್ಯವಿಲ್ಲದಿದ್ದರೆ ನನಗೆ ಹೇಳು ? ನಿನಗೆ ಇಷ್ಟವಾದ ಕೆಲಸವನ್ನು ಮಾಡುವೆನು. ಎಲೈ ರಾಜೇಂದ್ರನೆ ನನ್ನನ್ನು ಪಾಪವು ಮುಟ್ಟದಿರುವುದಾದರೆ, ನ್ಯಾಯವಾಗಿದ್ದರೆ ಆ ಕೆಲಸವನ್ನು ಹೇಳು ? ||೫||

ಎಂದು ಮಾರೀಚನು ಕೇಳಲು, ಆದಕ್ಕೆ ರಾವಣನು ಅಯೋಧ್ಯಾಪುರಕ್ಕೆ ಅಧಿಪತಿಯಾದ ದಶರಥರಾಜನಿಗೆ ಅತ್ಯಂತ ಪರಾಕ್ರಮವುಳ್ಳ ರಾಮನೆಂಬ ಜ್ಯೇಷ್ಠಪುತ್ರನಾದನು ||೬||

ವನದಲ್ಲಿರುವ ಜನಗಳಿಗೆ ಪ್ರಿಯನಾದ ಆ ಮಗನನ್ನು ಪತ್ನೀಸಹಿತವಾಗಿ ತಮ್ಮನಾದ ಲಕ್ಷ್ಮಣನೊಡನೆ ವನಕ್ಕೆ ಕಳುಹಿಸಿದನು ||೭||

ಅವನು ಭಯಂಕರವಾದ ವನದಲ್ಲಿ ಶುಭವಾದ ಪಂಚವಟಿಯ ಆಶ್ರಮದಲ್ಲಿರುವನು. ಅವನ ಹೆಂಡತಿಯಾದ ಸೀತೆಯು ವಿಶಾಲವಾದ ಕಣ್ಣುಳ್ಳವಳಾಗಿ ಲೋಕವೆಲ್ಲವನ್ನೂ ಮೋಹಗೊಳಿಸುತ್ತಿರುವಳು ||೮||

ಆ ರಾಮನು ಭೀಕರವಾದ ಪರಾಕ್ರಮವುಳ್ಳ ನನ್ನ ರಾಕ್ಷಸರು ನಿರಪರಾಧಿಗಳಾಗಿದ್ದರೂ ಹೊಡೆದು, ಖರನನ್ನೂ ಹೊಡೆದು ಯಾವ ಭಯವೂ ಇಲ್ಲದೆ ವನದಲ್ಲಿ ಸುಖವಾಗಿರುವನು ||೯||

ಭಗಿನ್ಯಾ ಮೆ ಶೂರ್ಪಣಖ್ಯಾ ನಿರ್ದೋಷಾಯಾಶ್ಚ ನಾಸಿಕಾಂ |
ಕರ್ಣೌ ಚಿಚ್ಛೇದ ದುಷ್ಟಾತ್ಮಾ ವನೆ ತಿಷ್ಠತಿ ನಿರ್ಭಯಃ ||೧೦||

ಅತಸ್ತ್ವಯಾ ಸಹಾಯೇನ ಗತ್ವಾ ತತ್ಪ್ರಾಣವಲ್ಲಭಾಂ |
ಆನಯಿಷ್ಯಾಮಿ ವಿಪಿನೆ ರಹಿತೆ ರಾಘವೇಣ ತಾಂ ||೧೧||

ತ್ವಂ ತು ಮಾಯಾಮೃಗೊ ಭೂತ್ವಾ ಹ್ಯಾಶ್ರಮಾದಪನೇಷ್ಯಸಿ |
ರಾಮಂ ಚ ಲಕ್ಷ್ಮಣಂ ಚೈವ ತದಾ ಸೀತಾಂ ಹರಾಮ್ಯಹಂ ||೧೨||

ತ್ವಂ ತು ತಾವತ್ಸಹಾಯಂ ಮೆ ಕೃತ್ವಾ ಸ್ಥಾಸ್ಯಸಿ ಪೂರ್ವವತ್ |
ಇತ್ಯೇವಂ ಭಾಷಮಾಣಂ ತಂ ರಾವಣಂ ವೀಕ್ಷ್ಯ ವಿಸ್ಮಿತಃ ||೧೩||

ಕೇನೇದಮುಪದಿಷ್ಟಂ ತೆ ಮೂಲಘಾತಕರಂ ವಚಃ |
ಸ ಏವ ಶತ್ರುರ್ವಧ್ಯಶ್ಚ ಯಸ್ತ್ವನ್ನಾಶಂ ಪ್ರತೀಕ್ಷತೆ |
ರಾಮಸ್ಯ ಪೌರುಷಂ ಸ್ಮೃತ್ವಾ ಚಿತ್ತಮುಧ್ಯಾಪಿ ರಾವಣ ||೧೪||

ಬಾಲೋಪಿ ಮಾಂ ಕೌಶಿಕಸ್ಯ ಯಜ್ಞಸಂರಕ್ಷಣಾಯ ಸಃ |
ಆಗತಸ್ತ್ವಿಷುಣೈಕೇನ ಪಾತಯಾಮಾಸ ಸಾಗರೆ ||೧೫||

---

ಹೀಗೆ ವನದಲ್ಲಿ ಭೀತಿಯಿಲ್ಲದಿರುವ ಆ ದುಷ್ಟನು ನಿರ್ದೋಷಿಯಾದ ನನ್ನ ತಂಗಿಯಾದ ಶೂರ್ಪಣಖಿಯ ಕಿವಿ ಮೂಗನ್ನು ಕತ್ತರಿಸಿದನು ||೧೦||

ಆ ಕಾರಣದಿಂದ ಸಹಾಯನಾದ ನಿನ್ನೊಡನೆ ಹೋಗಿ ರಾಮನಿಂದ ಕೂಡಿದ ಅರಣ್ಯದಲ್ಲಿ ಅವನಿಗೆ ಪ್ರಾಣಕಾಂತೆಯಾದ ಸೀತೆಯನ್ನು ತರುವೆನು ||೧೧||

ನೀನು ಮಾಯೆಯಿಂದ ಮೃಗರೂಪನಾಗಿ ರಾಮನನ್ನೂ, ಲಕ್ಷ್ಮಣನನ್ನೂ ಆಶ್ರಮದಿಂದ ಎಳೆದುಕೊಂಡು ಹೋಗು. ಆಗ ನಾನು ಸೀತೆಯನ್ನು ತರುವೆನು ||೧೨||

ನನಗೆ ನೀನು ಇಷ್ಟುಮಾತ್ರ ಸಹಾಯಮಾಡಿ ನೀನು ಪೂರ್ವದಂತೆಯೇ ಇರು, ಎಂದು ಹೇಳಿದ ರಾವಣನ ಮಾತನ್ನು ಕೇಳಿ ಮಾರೀಚನು ಆಶ್ಚರ್ಯಪಟ್ಟು ||

ಎಲೈ ರಾವಣನೇ, ಬೇರಿಗೆ ಕೊಡಲಿಯಾದ ಈ ಮಾತು ನಿನಗೆ ಯಾವನಿಂದ ಉಪದೇಶಮಾಡಲ್ಪಟ್ಟಿತೋ 'ಅವನೇ ನಿನಗೆ ಶತ್ರುವು, ಅವನೇ ವಧಿಸಲು ಯೋಗ್ಯನು. ಯಾವನು ನಿನ್ನ ನಾಶವನ್ನೇ ಕಾದಿರುವನೋ ಅವನೇ ಇವನೆಂದು ತಿಳಿ, ರಾಮನ ಪರಾಕ್ರಮವನ್ನು ಸ್ಮರಿಸಿಕೊಂಡರೆ ಚಿತ್ತವು ಈಗಲೂ ಬೆರಗಾಗುವುದು ||೧೪||

ವಿಶ್ವಾಮಿತ್ರನ ಯಜ್ಞಸಂರಕ್ಷಣೆಗಾಗಿ ಬಂದಿದ್ದ ಆ ರಾಮನು ಬಾಲಕನಾದಾಗ್ಯೂ ಒಂದು ಬಾಣದಿಂದ ನನ್ನನ್ನು ಸಮುದ್ರದಲ್ಲಿ ಕೆಡವಿದನು ||೧೫||

ಯೋಜನಾನಾಂ ಶತಂ ರಾಮಸ್ತದಾದಿ ಭಯವಿಹ್ವಲಃ |
ಸ್ಮೃತ್ವಾ ಸ್ಮೃತ್ವಾ ತದೇವಾಹಂ ರಾಮಂ ಪಶ್ಯಾಮಿ ಸರ್ವತಃ ||೧೭||

ದಂಡಕೇಪಿ ಪುನರಪ್ಯಹಂ ವನೆ ಪೂರ್ವವೈರಮನುಚಿಂತಯನ್ಹೃದಿ |
ತೀಕ್ಷ್ಣಶೃಂಗಮೃಗರೂಪಮೇಕದಾ ಮಾದೃಶೈರ್ಬಹುಭಿರಾವೃತೋಭ್ಯಯಾಂ|

ರಾಘವಂ ಜನಕಜಾಸಮನ್ವಿತಂ ಲಕ್ಷ್ಮಣೇನ ಸಹಿತಂ ತ್ವರಾನ್ವಿತಃ |
ಆಗತೋಹಮಥ ಹಂತುಮುದ್ಯತೋ ಮಾಂ ವಿಲೋಕ್ಯ ಶರಮೇಕಮುಕ್ಷಿಪತ್||

ತೇನ ವಿದ್ಧಹೃದಯೋಹಮುದ್ಭ್ರಮನ್ ರಾಕ್ಷಸೇಂದ್ರ ಪತಿತೋಸ್ಮಿ
ಸಾಗರೆ |
ತತ್ಪ್ರಭೃತ್ಯಹಮಿದಂ ಸಮಾಶ್ರಿತಃ ಸ್ಥಾನಮೂರ್ಜಿತಮಿದಂ ಭಯಾರ್ದಿತಃ ||

ರಾಮಮೇವ ಸತತಂ ವಿಭಾವಯೇ ಭೀತಭೀತ ಇವ ಭೋಗರಾಶಿತಃ |
ರಾಜರತ್ನರಮಣೀರಥಾದಿಕಂ ಶ್ರೋತ್ರಯೋರ್ಯದಿ ಗತಂ ಭಯಂ ಭವೇತ್ |
ರಾಮ ಆಗತ ಇಹೇತಿ ಶಂಕಯಾ ಬಾಹ್ಯಕಾರ್ಯಮಪಿ ಸರ್ವಮತ್ಯಜಂ ||೨೦||

---

ನೂರುಯೋಜನ ದೂರದಲ್ಲಿ ನನ್ನನ್ನು ಕೆಡವಿದುದರಿಂದ ಆ ಲಾಗಾಯಿತು ಭಯದಿಂದ ಕೂಡಿ ನಾನು ಆ ಸಾಮರ್ಥ್ಯವನ್ನೇ ಸ್ಮರಿಸಿ ಸ್ಮರಿಸಿ ಎಲ್ಲಾ ಕಡೆಯಲ್ಲೂ ಆ ರಾಮನನ್ನೇ ಕಾಣುತ್ತಿರುವೆನು ||೧೬||

ಪುನಃ ನಾನು ದಂಡಕಾರಣ್ಯದಲ್ಲಿ ಪೂರ್ವದ ವೈರದಿಂದ ತೀಕ್ಷ್ಣವಾದ ಕೊಂಬುಗಳುಳ್ಳ ಮೃಗರೂಪನಾಗಿ ನನ್ನಂತೆಯೇ ಇರುವ ಬಹುಜನಗಳಿಂದ ಕೂಡಿ ಹೊರಟೆನು ||೧೭||

ಜಾನಕಿಯೊಡನೆ ಕೂಡಿರುವ ಲಕ್ಷ್ಮಣಸಹಿತನಾದ ರಾಮನನ್ನು ಕೊಲ್ಲಬೇಕೆಂದು ಪ್ರಯತ್ನಪಟ್ಟು ಜಾಗ್ರತೆಯಾಗಿ ಹೋದೆನು. ಆ ರಾಮನು ನನ್ನನ್ನು ನೋಡಿ ಒಂದು ಬಾಣವನ್ನು ಎಸೆದನು ||೧೮||

ಅದು ನನ್ನ ಎದೆಗೆ ನಾಟಲು ನಾನು ರಕ್ತವನ್ನು ಕಾರುತ್ತ ಸಮುದ್ರದಲ್ಲಿ ಬಿದ್ದೆನು. ಎಲೈ ರಾಕ್ಷಸಶ್ರೇಷ್ಠನೇ! ಅದು ಮೊದಲಾಗಿ ನಾನು ಎತ್ತರವಾದ ಸ್ವಕೀಯವಾದ ಮನೆಯಿಂದ ಈ ಸ್ಥಳದಲ್ಲಿ ವಾಸಮಾಡುತ್ತಿರುವೆನು ||೧೯||

ಭೋಗಪದಾರ್ಥಗಳ ಸಮೂಹದಿಂದ ಅತ್ಯಂತ ಭಯಪಟ್ಟವನಂತೆ ರಾಮನನ್ನೇ ಸರ್ವದಾ ಭಾವಿಸುತ್ತಿರುವೆನು. ರಾಜ ರತ್ನ ರಮಣೀ ರಥವೇ ಮೊದಲಾದವುಗಳ

ನಿದ್ರಯಾ ಪರಿವೃತೋ ಯದಾ ಸ್ವಪೆ ರಾಮಮೇವ ಮನಸಾನುಚಿಂತಯನ್ |
ಸ್ವಪ್ನದೃಷ್ಟಿಗತರಾಘವಂ ತದಾ ಬೋಧಿತೋ ವಿಗತನಿದ್ರ ಆಸ್ಥಿತಃ ||೨೧||

ತದ್ಭವಾನಪಿ ವಿಮುಚ್ಯ ತಾಗ್ರಹಂ ರಾಘವಂ ಪ್ರತಿ ಗೃಹಂ ಪ್ರಯಾಹಿ ಭೋ|
ರಕ್ಷ ರಾಕ್ಷಸಕುಲಂ ಚಿರಾಗತಂ ತ್ವತ್ಕೃತೆ ಸಕಲಮೇವ ನಶ್ಯತಿ ||೨೨||

ತವ ಹಿತಂ ವದತೋ ಮಮ ಭಾಷಿತಂ ಪರಿಗೃಹಾಣ ಪರಾತ್ಮನಿ ರಾಘವೆ|
ತ್ಯಜ ವಿರೋಧಮತಿಂ ಭಜ ಭಕ್ತಿತಃ ಪರಮಕಾರುಣಿಕೋ ರಘುನಂದನಃ |
ಅಹಮಶೇಷಮಿದಂ ಮುನಿವಾಕ್ಯತೋಶೃಣವಮಾದಿಯುಗೆ ಪರಮೇಶ್ವರಃ ||

ಬ್ರಹ್ಮಣಾರ್ಥಿತ ಉವಾಚ ತಂ ಹರಿಃ ಕಿಂ ತವೇಪ್ಸಿತಮಹಂ ಕರೋಮಿ ತತ್|
ಬ್ರಹ್ಮಣೋಕ್ತಮರವಿಂದಲೋಚನ ತ್ವಂ ಪ್ರಯಾಹಿ ಭುವಿ ಮಾನುಷಂ ವಪುಃ||

ಶಬ್ದವು ಕಿವಿಗಳಿಗೆ ಬಿದ್ದದ್ದೇ ಆದರೆ ಭಯವು ಉಂಟಾಗುತ್ತದೆ. ರಾಮನು ಇತ್ತಕಡೆ ಬಂದನೆಂಬ ದಿಗಿಲಿನಿಂದ ನಾನು ಹೊರಗಿನ ಕೆಲಸವೆಲ್ಲವನ್ನೂ ಬಿಟ್ಟೆನು ||೨೦||

ನಿದ್ದೆಯಿಂದ ಯಾವಾಗ ನಾನು ಆವರಿಸಲ್ಪಡುವೆನೋ ಆಗ ರಾಮನನ್ನು ಮನಸ್ಸಿನಲ್ಲಿ ಆಲೋಚಿಸುತ್ತಲೇ ಮಲಗುವೆನು. ಮತ್ತೆ ಕನಸಿನಲ್ಲಿ ರಾಮನನ್ನು ಕಂಡು ದಿಗಿಲಿನಿಂದ ಎಚ್ಚರವಾದ ನಾನು ನಿದ್ರೆಯಿಲ್ಲದೆ ಕುಳಿತಿರುವೆನು ||೨೧||

ಆದುದರಿಂದ ನೀನೂ ಕೂಡ ರಾಮನಮೇಲೆ ಮೂರ್ಖತನವನ್ನು ಬಿಟ್ಟು ಮನೆಗೆ ಹೊರಡು. ಎಲೈ ರಾವಣನೇ ! ನಿನಗೋಸ್ಕರ ರಾಕ್ಷಸಕುಲವೇ ಹಾಳಾಗುವುದು. ಆದಕಾರಣ ಬಹುಕಾಲದಿಂದ ಬಂದ ರಾಕ್ಷಸಕುಲವನ್ನು ಹಾಳುಮಾಡದೆ ಪಾಲಿಸುವನಾಗು ||೨೨||

ನಿನಗೆ ಹಿತವನ್ನು ಹೇಳುವ ನನ್ನ ಮಾತನ್ನು ಕೇಳು, ಪರಮಾತ್ಮನಾದ ರಾಮನಲ್ಲಿ ವಿರೋಧಬುದ್ಧಿಯನ್ನು ಬಿಡು, ಭಕ್ತಿಯಿಂದ ರಾಮನನ್ನು ಭಜಿಸು, ಆ ರಾಮನು ಅತ್ಯಂತ ದಯಾಶಾಲಿಯು, ಕೃತಯುಗದಲ್ಲಿ ಈ ರಾಮನು ಪರಮೇಶ್ವರನೆಂದು ನಾರದಾದಿ ಮುನಿಗಳ ಮಾತಿನಿಂದ ನಾನು ಕೇಳಿರುವೆನು ||೨೩||

ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟ ಶ್ರೀಹರಿಯು ಅವನನ್ನು ಕುರಿತು ನಿನಗೆ ಇಷ್ಟವಾದುದನ್ನು ಕೇಳು, ನಾನು ಮಾಡುವೆನು ಎನಲು, ಆಗ ಬ್ರಹ್ಮನು ಎಲೈ ಕಮಲಲೋಚನನೇ ನೀನು ಭೂಮಿಯಲ್ಲಿ ಮನುಷ್ಯಶರೀರವನ್ನು ಹೊಂದು ||೨೪||

ದಶರಥಾತ್ಮಜಭಾವಮಂಜಸಾ ಜಹಿ ರಿಪುಂ ದಶಕಂಧರಂ ಹರೇ ||೨೫||

ಅತೋ ನ ಮಾನುಷೋ ರಾಮಃ ಸಾಕ್ಷಾನ್ನಾರಾಯಣೋವ್ಯಯಃ |
ಮಾಯಾಮಾನುಷರೂಪೇಣ ವನಂ ಯಾತೋತಿನಿರ್ಭಯಂ ||೨೬||

ಭೂಭಾರಹರಣಾರ್ಥಾಯ ಗಚ್ಛ ತಾತ ಗೃಹಂ ಸುಖಂ |
ಶ್ರುತ್ವಾ ಮಾರೀಚವಚನಂ ರಾವಣಃ ಪ್ರತ್ಯಭಾಷತ ||೨೭||

ಪರಮಾತ್ಮಾ ಯದಾ ರಾಮಃ ಪ್ರಾರ್ಥಿತೋ ಬ್ರಹ್ಮಣಾ ಕಿಲ |
ಮಾಂ ಹಂತುಂ ಮಾನುಷೋ ಭೂತ್ವಾ ಯತ್ನಾದಿಹ ಸಮಾಗತಃ ||೨೮||

ಕರಿಷ್ಯತ್ಯಚಿರಾದೇವ ಸತ್ಯಸಂಕಲ್ಪ ಈಶ್ವರಃ |
ಅತೋಹಂ ಯತ್ನತಃ ಸೀತಾಮಾನೇಷ್ಯಾಮ್ಯೇವ ರಾಘವಾತ್ ||೨೯||

ವಧೇ ಪ್ರಾಪ್ತೇ ರಣೇ ವೀರ ಪ್ರಾಪ್ಸ್ಯಾಮಿ ಪರಮಂ ಪದಂ |
ಯದ್ವಾ ರಾಮಂ ರಣೇ ಹತ್ವಾ ಸೀತಾಂಪ್ರಾಪ್ಸ್ಯಾಮಿ ನಿರ್ಭಯಃ ||೩೦||

---

ನೀನು ದಶರಥರಾಯನಿಗೆ ಮಗನಾಗಿ ಹುಟ್ಟಿ ಜಾಗ್ರತೆಯಾಗಿ ಪ್ರಪಂಚಕ್ಕೆ ಶತ್ರುವಾದ ರಾವಣನನ್ನು ಸಂಹರಿಸು ||೨೫||

ಎಂದು ಬ್ರಹ್ಮನು ಪ್ರಾರ್ಥನೆಮಾಡಲು, ನಾರಾಯಣನು ಒಪ್ಪಿಕೊಂಡನು. ಆದುದರಿಂದ ರಾಮನು ಮನುಷ್ಯನಲ್ಲ. ನಾಶರಹಿತನಾದ ನಾರಾಯಣನೇ ಮಾಯಾಸ್ವರೂಪದಿಂದ ಪ್ರತ್ಯಕ್ಷವಾಗಿ ಅತ್ಯಂತ ನಿರ್ಭಯನಾಗಿ ವನವನ್ನು ಸೇರಿರುವನು ||

ಭೂಭಾರವನ್ನು ಪರಿಹರಿಸುವುದಕ್ಕಾಗಿ ಬಂದಿರುವನಾದುದರಿಂದ ಎಲೈ ತಂದೆಯೇ! ನೀನು ಸುಖವಾಗಿ ಮನೆಗೆ ಹೋಗೆಂದು ಹೇಳಿದ ಮಾರೀಚನ ಮಾತನ್ನು ರಾವಣನು ಕೇಳಿ ಅದಕ್ಕೆ ಪ್ರತಿಯಾಗಿ ||೨೭||

ಬ್ರಹ್ಮನಿಂದ ಪ್ರಾರ್ಥಿತನಾದ ಪರಮಾತ್ಮನು ರಾಮನೆಂಬ ಹೆಸರಿನಿಂದ ಮನುಷ್ಯನಾಗಿ ನನ್ನನ್ನು ಕೊಲ್ಲುವುದಕ್ಕಾಗಿ ಇಲ್ಲಿಗೆ ಬಂದಿರುವನಾದರೆ ||೨೮||

ಈಶ್ವರನು ಸತ್ಯಸಂಕಲ್ಪನಾದಕಾರಣ ಜಾಗ್ರತೆಯಾಗಿಯೇ ಅದರಂತೆ ಮಾಡುವನು ಆ ಕಾರಣದಿಂದಲೇ ನಾನು ಪ್ರಯತ್ನಪೂರ್ವಕವಾಗಿ ಸೀತೆಯನ್ನು ತರುವೆನು||

ಎಲೈ ವೀರನೇ! ಯುದ್ಧದಲ್ಲಿ ರಾಮನಿಂದ ನನಗೆ ಮರಣವು ಪ್ರಾಪ್ತವಾದರೆ ಸರ್ವೋತ್ಕೃಷ್ಟವಾದ ಆವನ ಸ್ಥಾನವನ್ನೇ ಸೇರುವೆನು. ಇಲ್ಲದಿದ್ದರೆ ಯುದ್ಧದಲ್ಲಿ ರಾಮನನ್ನು ಕೊಂದು ಸೀತೆಯನ್ನು ಪಡೆಯುವೆನು ||೩೦||

ಅಶೋಕ್ತಿಷ್ಠ ಮಹಾಭಾಗ ವಿಚಿತ್ರಮೃಗರೂಪಧೃಕ್ |
ರಾಮಂ ಸಲಕ್ಷ್ಮಣಂ ಶೀಘ್ರಮಾಶ್ರಮಾದತಿದೂರತಃ |
ಆಕೃಷ್ಯ ಗಚ್ಛ ತ್ವಂ ಶೀಘ್ರಂ ಸುಖಂ ತಿಷ್ಠ ಯಥಾ ಪುರಾ ||೩೧||
ಅತಃಪರಂ ಚೇದ್ಯತ್ಕಿಂಚಿದ್ಭಾಷಸೆ ಮದ್ವಿಭೀಷಣಂ |
ಹನಿಷ್ಯಾಮ್ಯಸಿನಾನೇನ ತ್ವಾಮತ್ರೈವ ನ ಸಂಶಯಃ |
ಮಾರೀಚಸ್ತದ್ವಚಃ ಶ್ರುತ್ವಾ ಸ್ವಾತ್ಮನ್ಯೇವಾನುಚಿಂತಯತ್ ||೩೨||
ಯದಿ ಮಾಂ ರಾಘವೋ ಹನ್ಯಾತ್ತದಾ ಮುಕ್ತೋ ಭವಾರ್ಣವಾತ್ |
ಮಾಂ ಹನ್ಯಾದ್ಯದಿ ಚೇದ್ದುಷ್ಟಸ್ತದಾ ಮೇ ನಿರಯೋ ಧ್ರುವಂ ||೩೩||
ಇತಿ ನಿಶ್ಚಿತ್ಯ ಮರಣಂ ರಾಮಾದುತ್ಥಾಯ ವೇಗತಃ |
ಅಬ್ರವೀದ್ರಾವಣಂ ರಾಜನ್ಕರೋಮ್ಯಾಜ್ಞಾಂ ತವ ಪ್ರಭೋ ||೩೪||
ಇತ್ಯುಕ್ತ್ವಾ ರಥಮಾಸ್ಥಾಯ ಗತೌ ರಾಮಾಶ್ರಮಂ ಪ್ರತಿ |
ಶುದ್ಧಜಾಂಬೂನದಪ್ರಖ್ಯೋ ಮೃಗೋಽಭೂದ್ರೌಪ್ಯಬಿಂದುಕಃ ||೩೫||

---

ಆದುದರಿಂದ ಎಲೈಭಾಗ್ಯಶಾಲಿಯೇ! ನೀನು ಏಳೇಳು? ವಿಚಿತ್ರವಾದ ಮೃಗವೇಷದಿಂದ ಲಕ್ಷ್ಮಣಸಹಿತನಾದ ರಾಮನನ್ನು ಜಾಗ್ರತೆಯಾಗಿ ಆಶ್ರಮದಿಂದ ಬಹುದೂರವಾಗಿ ಎಳದುಕೊಂಡುಹೋಗು. ಬಳಿಕ ನೀನು ಪೂರ್ವದಂತೆಯೇ ಸುಖವಾಗಿರು ||೩೧||

ಇದರಮೇಲೂ ನೀನು ನನ್ನನ್ನು ಭಯಪಡಿಸುವ ಯಾವ ಮಾತನ್ನಾದರೂ ಆಡಿದರೆ ಇಲ್ಲಿಯೇ ನಿನ್ನನ್ನು ಈ ಕತ್ತಿಯಿಂದ ಕತ್ತರಿಸುವೆನು. ಸಂದೇಹವಿಲ್ಲವೆಂದು ಹೇಳಿದ ರಾವಣನ ಮಾತನ್ನು ಮಾರೀಚನು ಕೇಳಿ ತನ್ನ ಮನಸ್ಸಿನಲ್ಲಿಯೇ ಆಲೋಚಿಸಿ ||೩೨||

ರಾಮನು ನನ್ನನ್ನು ಸಂಹರಿಸಿದರೆ ಲಿಂಗಶರೀರವು ಹೋಗುವುದರಿಂದ ಸಂಸಾರದಿಂದ ಮುಕ್ತನಾಗುವೆನು. ಈ ದುಷ್ಟನು ನನ್ನನ್ನು ಕೊಂದರೆ ನನಗೆ ನಿಶ್ಚಯವಾಗಿಯೂ ನರಕವಾಗುವುದು ||೩೩||

ಎಂದು ಆಲೋಚಿಸಿ ರಾಮನಿಂದ ಮರಣವನ್ನು ನಿಶ್ಚಯಿಸಿ ಬೇಗನೆ ಎದ್ದು ರಾವಣನನ್ನು ಕುರಿತು ಎಲೈ ರಾಯನೇ ಪ್ರಭುವಾದ ನಿನ್ನ ಆಜ್ಞೆಯನ್ನು ನಾನು ನಡೆಸುವೆನೆಂದನು ||೩೪||

ಬಳಿಕ ಹೀಗೆಯೇ ಸರಿಯೆಂದು ರಾವಣ ಮಾರೀಚರಿಬ್ಬರೂ ನಿಶ್ಚಯಿಸಿ ರಥ

ರತ್ನಶೃಂಗೋ ಮಣಿಖುರೋ ನೀಲರತ್ನವಿಲೋಚನಃ |
ವಿದ್ಯುತ್ಪ್ರಭೋ ವಿಮುಗ್ಧಾಸ್ಯೋ ವಿಚಚಾರ ವನಾಂತರೇ |
ರಾಮಾಶ್ರಮಪದಸ್ಯಾಂತೇ ಸೀತಾದೃಷ್ಟಿಪಥೇ ಚರನ್ ||೩೬||
ಕ್ಷಣಂ ಚ ಧಾವತ್ಯವತಿಷ್ಠತೇ ಕ್ಷಣಂ ಸಮೀಪಮಾಗತ್ಯ ಪುನರ್ಭಯಾವೃತಃ|
ಏವಂ ಸ ಮಾಯಾಮೃಗವೇಷರೂಪಧೃಕ್ಚಚಾರ ಸೀತಾಂಪರಿಮೋಹಯನ್ಖಲಃ

ಷಷ್ಠಸ್ಸರ್ಗ ಸಮಾಪ್ತಃ



---

ವನ್ನೇರಿ ರಾಮನ ಆಶ್ರಮವನ್ನು ಕುರಿತು ಹೊರಟರು. ಅಲ್ಲಿ ಮಾರೀಚನು ಶುದ್ಧವಾದ ಚಿನ್ನಕ್ಕೆ ಸಮಾನವಾದ ಕಾಂತಿಯುಳ್ಳ ಬೆಳ್ಳಿಯ ಚುಕ್ಕೆಗಳುಳ್ಳ ಮೃಗವಾದನು ||

ರನ್ನದ ಕೊಂಬುಗಳುಳ್ಳದ್ದಾಗಿಯೂ, ಮಣಿಮಯವಾದ ಗೊರಸುಗಳುಳ್ಳದಾಗಿಯೂ, ಇಂದ್ರನೀಲದಂತೆ ಕಣ್ಣುಗಳುಳ್ಳದಾಗಿಯೂ, ಮಿಂಚಿನಂತೆ ಥಳಥಳಿಸುತ್ತಾ ಮನೋಹರವಾದ ಮುಖವುಳ್ಳದ್ದಾಗಿ ಶ್ರೀರಾಮನ ಆಶ್ರಮಪ್ರದೇಶದೊಳಗೆ ಸೀತೆಯ ದೃಷ್ಟಿಗೋಚರವಾಗಿ ಮಾರ್ಗದಲ್ಲಿ ನಡೆಯುತ್ತಾ ವನದೊಳಗೆ ಆ ಮೃಗವು ಸಂಚರಿಸಿತು ||೩೬||

ಒಂದು ಕ್ಷಣ ಓಡುವನು; ಒಂದು ಕ್ಷಣ ನಿಲ್ಲುವನು, ಸಮೀಪವನ್ನು ಸೇರಿ ತಿರುಗಿ ಭಯದಿಂದ ಓಡುವನು, ಈಪ್ರಕಾರ ಮಾಯೆಯಿಂದ ಮೃಗವೇಷವನ್ನು ಧರಿಸಿರುವ ದುಷ್ಟನಾದ ಮಾರೀಚನು ಸೀತೆಯನ್ನು ಮೋಹಪಡಿಸುತ್ತಾ ಸಂಚರಿಸಿದನು ||

ಇಲ್ಲಿಗೆ ಆರನೇ ಸರ್ಗವು ಮುಗಿದುದು.



# ಸಪ್ತಮಸ್ಸರ್ಗಃ.

ಶ್ರೀ ಮಹಾದೇವಃ ||

ಅಥ ರಾಮೋಪಿ ತತ್ಸರ್ವಂ ಜ್ಞಾತ್ವಾ ರಾವಣಚೇಷ್ಟಿತಂ |
ಉವಾಚ ಸೀತಾ ಮೇಕಾಂತೇ ಶೃಣು ಜಾನಕಿ ಮೇ ವಚಃ ||೧||

ರಾವಣೋ ಭಿಕ್ಷುರೂಪೇಣ ಆಗಮಿಷ್ಯಸಿ ತೇಂತಿಕಂ |
ತ್ವಂತು ಛಾಯಾಂ ತ್ವದಾಕಾರಾಂ ಸ್ಥಾಪಯಿತ್ವೋಟಜೇ ವಿಶ ||೨||

ಅಗ್ನಾವದೃಶರೂಪೇಣ ವರ್ಷಂ ತಿಷ್ಠ ಮಯಾಜ್ಞಯಾ |
ರಾವಣಸ್ಯ ವಧಾಂತೇ ಮಾಂ ಪೂರ್ವವತ್ಪ್ರಾಪ್ಸ್ಯಸೇ ಶುಭೇ ||೩||

ಶ್ರುತ್ವಾ ರಾಮೋದಿತಂ ವಾಕ್ಯಂ ಸಾಪಿ ತತ್ರ ತಥಾಕರೋತ್ |
ಮಾಯಾ ಸೀತಾಂ ಬಹಿಃಸ್ಥಾಪ್ಯ ಸ್ವಯಮಂತರ್ದಧೇನಲೇ ||೪||

ಮಾಯಾ ಸೀತಾ ತದಾಪಶ್ಯ ನ್ಮೃಗಂ ಮಾ ವಿನಿರ್ಮಿತಂ |
ಹಸಂತೀ ರಾಮ ಮಭ್ಯೇತ್ಯ ಪ್ರೋವಾಚ ವಿನಯಾನ್ವಿತಾ ||೫||

---

ಶ್ರೀ ಪರಮೇಶ್ವರನು ಪಾರ್ವತಿಯನ್ನು ಕುರಿತು ಹೇಳುವನು ||

ಆ ಬಳಿಕ ಶ್ರೀರಾಮನು ಅದೆಲ್ಲವನ್ನೂ ರಾವಣನ ವ್ಯಾಪಾರವೆಂದು ತಿಳಿದು ಸೀತೆಗೆ ಏಕಾಂತದಲ್ಲಿ ಹೇಳಿದನು. ಎಲ ಜಾನಕಿಯೇ ! ನನ್ನ ಮಾತನ್ನು ಕೇಳು ||೧||

ರಾವಣನು ಸನ್ಯಾಸಿಯ ರೂಪದಿಂದ ನಿನ್ನ ಸಮೀಪಕ್ಕೆ ಬರುವನು. ನೀನು ನಿನ್ನ ಆಕಾರವಾದ ನೆರಳನ್ನೇ ಆಶ್ರಮದಲ್ಲಿ ನಿಲ್ಲಿಸಿ ಅಗ್ನಿಯನ್ನು ಪ್ರವೇಶಮಾಡು ||೨||

ನನ್ನಾಜ್ಞೆಯಿಂದ ಅಗ್ನಿಯಲ್ಲಿ ಅದೃಶ್ಯಳಾಗಿ ಒಂದು ವರ್ಷ ಇರು. ಎಲೆ ಶುಭೆಯೇ ! ರಾವಣನ ಸಂಹಾರವಾದ ಬಳಿಕ ಪೂರ್ವದಂತೆ ನನ್ನನ್ನು ಸೇರುವೆ ||೩||

ಎಂದು ಹೇಳಿದ ರಾಮನಮಾತನ್ನು ಕೇಳಿ ಸೀತೆಯು ಹಾಗೆಯೇ ಮಾಯಾ ಸೀತೆಯನ್ನು ಹೊರಗೆ ನಿಲ್ಲಿಸಿ ತಾನು ಅಗ್ನಿಯಲ್ಲಿ ಮರೆಯಾದಳು ||೪||

ಆಗ ಮಾಯಾಸೀತೆಯು ಮಾಯಾನಿರ್ಮಿತವಾದ ಮೃಗವನ್ನು ನೋಡಿ ನಗುತ್ತಾ ರಾಮನ ಸಮೀಪವನ್ನು ಸೇರಿ ವಿನಯದಿಂದ ಕೂಡಿ ನುಡಿದಳು ||೫||

ಪಶ್ಯ ರಾಮ ಮೃಗಂ ಚಿತ್ರಂ ಕನಕಂ ರತ್ನಭೂಷಿತಂ |
ವಿಚಿತ್ರಬಿಂದುಭಿರ್ಯುಕ್ತಂ ಚರಂತಮಕುತೋಭಯಂ ||೬||

ಬಧ್ವಾ ದೇಹಿ ಮಮ ಕ್ರೀಡಾಮೃಗೋ ಭವತು ಸುಂದರಃ |
ತಥೇತಿ ಧನುರಾದಾಯ ಗಚ್ಛನ್ ಲಕ್ಷ್ಮಣಮಬ್ರವೀತ್ ||೭||

ರಕ್ಷ ತ್ವ ಮತಿಯತ್ನೇನ ಸೀತಾಂ ಮತ್ಪ್ರಾಣವಲ್ಲಭಾಂ |
ಮಾಯಿನಸ್ಸಂತಿ ವಿಪಿನೆ ರಾಕ್ಷಸಾ ಘೋರದರ್ಶನಾಃ ||೮||

ಅತೋತ್ರಾವಹಿತಃ ಸಾಧ್ವೀಂ ರಕ್ಷ ಸೀತಾಮನಿಂದಿತಾಂ !
ಲಕ್ಷ್ಮಣೋ ರಾಮಮಾಹೇದಂ ದೇವಾಯಂ ಮೃಗರೂಪಧೃಕ್ ||
ಮಾರೀಚೋತ್ರ ನ ಸಂದೇಹ ಏವಂ ರೂಪೋ ಮೃಗಃ ಕುತಃ ||೯||

---

ಇದರಿಂದ ಮಹಾತ್ಮರು ಮಾಯಾವಿಗಳನ್ನು ಮಾಯೆಯಿಂಲೇ ಸ್ವಾಧೀನಪಡಿಸಿಕೊಳ್ಳುವರೆಂತಲೂ ತಿಳಿಯತಕ್ಕದ್ದು. ಎಲೈ ರಾಮನೇ ಆಶ್ಚರ್ಯಕರವಾಗಿ ಮಣಿಗಳಿಂ ಭೂಷಿತವಾದ ವಿಚಿತ್ರವಾದ ಚುಕ್ಕೆಗಳಿಂದ ಕೂಡಿ ಯಾತರಲ್ಲೂ ಭಯವಿಲ್ಲದೇ ಸಂಚರಿಸುವ ಹಿರಣ್ಮಯವಾದ ಈ ಮೃಗವನ್ನು ನೋಡು ||೬||

ಇದನ್ನು ಹಿಡಿದು ನನಗೆ ಕೊಡುವನಾಗು. ಸುಂದರವಾದ ಈ ಮೃಗವು ನನಗೆ ಕ್ರೀಡಾಮೃಗವಾಗಲಿ ಎಂದು ಸೀತೆ ಕೇಳಲು, ಹಾಗೇ ಆಗಲೆಂದು ರಾಮನು ಧನುವಂ ಗ್ರಹಿಸಿ ಹೋಗುತ್ತಾ ಲಕ್ಷ್ಮಣನಿಗೆ ಹೇಳಿದನು ||೭||

ಎಲೈ ಲಕ್ಷ್ಮಣನೇ ಅತಿಶಯವಾದ ಪ್ರಯತ್ನದಿಂದ ನನಗೆ ಪ್ರಾಣಕ್ಕಿಂತಲೂ ಪ್ರಿಯಳಾದ ಸೀತೆಯನ್ನು ನೀನು ರಕ್ಷಿಸುವನಾಗು, ಭಯಂಕರವಾದ ನೋಟವುಳ್ಳ ರಾಕ್ಷಸರು ಮಾಯಾವಿಗಳಾಗಿ ಅರಣ್ಯದಲ್ಲಿರುವರು ||೮||

ಆದುದರಿಂದ ಇಲ್ಲಿ ಸನ್ನದ್ಧನಾಗಿ ನೀನು ನಿಂದಿತಳಾಗದೇ ಸಾಧುವಾಗಿರುವಯನ್ನು ರಕ್ಷಿಸುವನಾಗು ಎಂದು ರಾಮನು ಹೇಳುವಲ್ಲಿ ಲಕ್ಷ್ಮಣನು ಎಲೈ ರಾಮನೇ ಇವನು ಮೃಗರೂಪವನ್ನು ಧರಿಸಿರುವ ಮಾರೀಚನು, ಇಲ್ಲಿ ಸಂದೇಹವಿಲ್ಲ. ಇಂತಹ ರೂಪವುಳ್ಳ ಮೃಗವು ಹ್ಯಾಗೆ ಉಂಟಾದೀತು. ಎಂದೀರೀತಿಯಾಗಿ ರಾಮನಿಗೆ ಹೇಳಿದನು ||೯||

ಶ್ರೀರಾಮಃ ||

ಯದಿ ಮಾರೀಚ ಏವಾಯಂ ತದಾ ಹನ್ಮಿ ನ ಸಂಶಯಃ ।
ಮೃಗಶ್ಚೇದಾನಯಿಷ್ಯಾಮಿ ಸೀತಾವಿಶ್ರಾಮಹೇತವೇ ||೧೦||

ಗಮಿಷ್ಯಾಮಿ ಮೃಗಂ ಬಧ್ವಾ ಹ್ಯಾನಯಿಷ್ಯಾಮಿ ಸತ್ವರಃ |
ತ್ವಂ ಪ್ರಯತ್ನೇನ ಸಂತಿಷ್ಠ ಸೀತಾಸಂರಕ್ಷಣೋದ್ಯತಃ ||೧೧||

ಇತ್ಯುಕ್ತ್ವಾ ಪ್ರಯಯೌ ರಾಮೋ ಮಾಯಾಮೃಗಮನುದ್ರುತಃ |
ಮಾಯಾ ಯದಾಶ್ರಯಾ ಲೋಕಮೋಹಿನೀ ಜಗದಾಕೃತಿಃ ||
ನಿರ್ವಿಕಾರಶ್ಚಿದಾತ್ಮಾಪಿ ಪೂರ್ಣೋಽಪಿ ಮೃಗಮನ್ವಗಾತ್ ||೧೨||

---

ಅದಕ್ಕೆ ಶ್ರೀರಾಮನು ಇವನು ಮಾರೀಚನೇ ಆದರೆ ಸಂಹರಿಸುವೆನು, ಸಂದೇಹವಿಲ್ಲ. ಮೃಗವಾಗಿದ್ದಪಕ್ಷದಲ್ಲಿ ಸೀತೆಗೆ ಆಟಕ್ಕೋಸ್ಕರ ತರುವೆನು ||೧೦||

ಈಗ ನಾನು ಹೋಗುವೆನು, ಮೃಗವನ್ನು ಬೇಗನೆ ಹಿಡಿದು ತರುವೆನು. ನೀನು ಸೀತೆಯ ಸಂರಕ್ಷಣೆಯಲ್ಲಿ ಉದ್ಯುಕ್ತನಾಗಿ ಸನ್ನಾಹದಿಂದಿರುವನಾಗು ||೧೧||

ಎಂದು ಹೇಳಿ ರಾಮನು ಮಾಯಾ ಮೃಗವನ್ನನುಸರಿಸಿಕೊಂಡು ಓಡುತ್ತಾ ಹೋದನು. ಲೋಕವನ್ನು ಮೋಹಪಡಿಸುವ ಮಾಯೆಯು ಯಾವನನ್ನಾಶ್ರಯಿಸಿ ಜಗದ್ರೂಪಳವಾಗಿರುವುದೋ ಆ ರಾಮನು ನಿರ್ವಿಕಾರವಾದ ಜ್ಞಾನಸ್ವರೂಪನಾದಾಗ್ಯೂ ಪೂರ್ಣನಾದಾಗ್ಯೂ ಮೃಗವನ್ನನುಸರಿಸಿ ಹೋದನು ||೧೨|| ಇಲ್ಲಿ ಪೂರ್ಣನಿಗೆ ಗಮನವೆಂತಲೂ, ಜ್ಞಾನಸ್ವರೂಪನಿಗೆ ಜ್ಞಾನವೆಂತಲೂ, ವಿರುದ್ಧವಾಗಿ ತೋರುವುದು. ಮಾಯಾಶ್ರಯನೆನ್ನುವುದರಿಂದಲೇ ಇದಕ್ಕೆ ಸಮಾಧಾನವೆಂದು ತಿಳಿಯತಕ್ಕದ್ದು. ಅದೆಂತೆಂದರೆ–ಪರಮಾತ್ಮನಿಗೆ ಆಕಾಶದಂತೆ ರೂಪರಹಿತವಾಗಿರುವುದೇ ನಿಜಸ್ವರೂಪಸ್ಥಿತಿಯು, ಆಕಾಶವು ನಿಜಶಬ್ದದಿಂದ ಗೋಚರವೆನಿಸುವಂತೆ ಈ ಪರಮಾತ್ಮನು ನಿಜಶಬ್ದವಾದ ಮಹಾವಾಕ್ಯಗಳ ಅರ್ಥವಿಚಾರದಿಂ ಗೋಚರನೆನಿಸುವನು. ಸತ್ತಾಮಾತ್ರದಿಂದಿರುವ ಆ ಪರಮಾತ್ಮನು ಆಕಾಶದಂತೆ ಜಡನಲ್ಲದುದರಿಂದ ಜ್ಞಾನಸ್ವರೂಪನೆನಿಸುವನು. ಆದುದರಿಂದಲೇ ಜ್ಞಾನಶಕ್ತಿಯು ಅವನಿಗೆ ಸ್ವಾಭಾವಿಕವೆನಿಸುವುದು. ಜ್ಞಾನಕ್ಕೆ ಇಚ್ಛೆಯು ಅದು ಅಮೋಘವಾದುದರಿಂದ ಅದಕ್ಕೆ ಗುಣವಾದ ಕ್ರಿಯೆಯೂ ಸಹ ಸಹಜವೆನಿಸುವುದು, ಈ ಶಕ್ತಿಗಳೆರಡೂ ಜ್ಞಾನಶಕ್ತಿಯಲ್ಲಿ ಅಂತರ್ಭಾವವಾಗಿರುವಲ್ಲಿ ಸುಪ್ತನಂತಾ ಪರಮಾತ್ಮನು ಸತ್ತಾಮಾತ್ರವಾದ ಸ್ಥಿತಿಯಿಂದ ಪೂರ್ಣನಾಗಿರುವನು ಶಸ್ತ್ರಧಾರಿಯು ಹ್ಯಾಗೆ ಸುಮ್ಮನಿರಲಾರನೋ ಹಾಗೆ ಜ್ಞಾನ

ಶಕ್ತಿಯುಳ್ಳವನು ಸುಮ್ಮನಿರಲಾರನಾದುದರಿಂದ ಬಹುರೂಪನಾಗಬೇಕೆಂದಿಚ್ಛೈಸುವನು. ಆಕ್ಷಣವೇ ಕ್ರಿಯಾಶಕ್ತಿಯಿಂದ ಸೂಕ್ಷ್ಮಸ್ಥೂಲರೂಪದಿಂದ ಪರಿಣಮಿಸುವನು. ತಾನೇ ನಿಮಿತ್ತವಾಗಿ ಪರಿಣಮಿಸುವುದರಿಂದ ಇವನ ರೂಪಾಂತರವನ್ನು ಭಾಸವೆಂದು ವಿದ್ವಾಂಸರು ಹೇಳುವರು. ಇವನ ಭಾಸನವೇ ಜಗತ್ತೆಂದು ಹೇಳಲ್ಪಡುವುದು ಇವನು ಕಾರಣವಾದ ಪ್ರಕೃತಿರೂಪವನ್ನು ಗ್ರಹಿಸುವಲ್ಲಿ ಜ್ಞಾನೇಚ್ಛಾಕ್ರಿಯಾಶಕ್ತಿಗಳ ಪ್ರಕಾಶಗಳೇ ಸತ್ವರಜಸ್ತಮೋಗುಣಗಳೆಂದು ಹೇಳಲ್ಪಡುವುವು. ಇವುಗಳಲ್ಲಿ ಇಚ್ಛಾಶಕ್ತ್ಯಾತ್ಮಕವಾದ ರಜವು ಚಪಲವಾದ್ದರಿಂದ ಸತ್ವವನ್ನೂ ತಮವನ್ನೂ ಹೊಂದುತ್ತಲೂ ಮಧ್ಯದಲ್ಲೇ ಅವುಗಳ ಅಂಶಗಳಿಂಕೂಡಿರುತ್ತಲೂ ಮೂರು ಬಗೆಯಾದುದು. ಸತ್ವತಮೆಗಳಿಂದಕೂಡಿ ಐದಾದ್ದರಿಂದ ಜ್ಞಾನ ಮನೋಬುದ್ಧಿ ಚಿತ್ತ ಅಹಂಕಾರಗಳೆಂಬ ಐದು ಅಂತಃಕರಣಗಳು, ಶ್ರೋತ್ರತ್ವಕ್ ಚಕ್ಷುರಸನಘ್ರಾಣಗಳೆಂಬ ಐದು ಜ್ಞಾನೇದ್ರಿಯಗಳು, ವಾಕ್ಪಾಣಿಪಾದ ಪಾಯೂಪಸ್ಥಗಳೆಂಬ ಐದು ಕರ್ಮೇಂದ್ರಿಯಗಳು, ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ಐದು ತನ್ಮಾತ್ರೆಗಳು, ವ್ಯೋಮ ವಾಯು ತೇಜೋ ಜಲ ಭೂಮಿಗಳೆಂದು ಐದು ಮಹಾ ಭೂತಗಳು, ಉಂಟಾದುವು. ಹೀಗೆ ಅಂತಃಕರಣವೃತ್ತಿ ರೂಪವಾದ ಪ್ರಾಣವೂ ಸಹ ಐದು ಬಗೆಯಾಗಿರುವುದು. ಈ ಗುಣಭೇದದಿಂದ ಪರಮಾತ್ಮನೂ ಕೂಡ ಪಂಚಾಯತನ ರೂಪಗಳಲ್ಲಿ ಪೂಜಿತನಾಗುವನು. ಈ ರೀತಿಯಿಂದ ದ್ವಿತೀಯನಾದ ಪರಮಾತ್ಮನ ಇಚ್ಛಾಕ್ರಿಯಾಶಕ್ತಿಗಳಿಂದ ಐದಾಗಿ ಪ್ರಕಾಶಿಸಿದ್ದರಿಂದ ಒಂಭತ್ತರವರೆಗೆ ಲೆಖ್ಖವೆಂದು ಪ್ರಸಿದ್ಧವಾಗಿರುವುದು. ಒಂಭತ್ತರಿಂದ ಲೆಖ್ಖವನ್ನು ಗುಣಿಸಿದಾಗ್ಯೂ ಕೂಡದಾಗ್ಯೂ ಒಂಭತ್ತೇ ಆಗುವುದು. ಹೀಗೆ ಒಬ್ಬ ಪರಮಾತ್ಮನೇ ಒಂಭತ್ತಾದ್ದರಿಂದ ದೃಷ್ಟಮೂರ್ತಿಯೆಂತಲೂ, ಸರ್ವವೂ ಬ್ರಹ್ಮವೆಂತಲೂ ತಿಳಿದವರು ಹೇಳುವರು. ಹೀಗೆ ನಾನಾರೂಪವಾಗಿ ವಿಹರಿಸುವಲ್ಲಿ ಬಾಹ್ಯದೃಷ್ಟಿಯಲ್ಲಿ ಚಲನಾದಿಗಳುಂಟಾದುವೆಂತಲೂ ವಸ್ತುತಃ ತನ್ನಲ್ಲೇ ತಾನು ಚಲಿಸುವುದರಿಂದ ಚಲನವೆಂತಲೂ ತಿಳಿಯತಕ್ಕದ್ದು. ಪ್ರಕೃತದಲ್ಲಿ ರಾಮನು ಆತ್ಮಾರಾಮನಾಗಿ ವಿಹರಿಸುವನಾದುದರಿಂದ ಯಾವ ವಿರೋಧವೂ ಇಲ್ಲವೆಂದು ತಿಳಿಯಬೇಕು. ಮತ್ತೂ ಪರಮಾರ್ಥವಾದ ಸೀತೆಯನ್ನು ಮರೆಮಾಡಿ ಮಾಯಾ ಸೀತೆಗೋಸುಗ ಓಡಾಡುವಂತೆ ಜ್ಞಾನಶಕ್ತಿಯನ್ನು ಪ್ರಕಾಶಪಡಿಸದೇ ಮಾಯಾಶಕ್ತಿಯಿಂದ ಜನಗಳ ರೀತಿಯನ್ನನುಸರಿಸಿ ನಡೆವನೆಂತಲೂ ತಿಳಿಯತಕ್ಕದ್ದು. ಇಲ್ಲಿ ಪರಮಾರ್ಥವಾದ ಅದ್ವಿತೀಯ ಭಾವವನ್ನು ತೋರುವುದೇ ಜ್ಞಾನಶಕ್ತಿಯು, ನಾನಾರೀತಿಯಾದ ಭೇದವನ್ನು ತೋರುವುದೇ ಮಾಯಾಶಕ್ತಿಯು. ಜ್ಞಾನಶಕ್ತಿ

ಭಕ್ತಾನುಕಂಪೀ ಭಗವಾನಿತಿ ಸತ್ಯಂ ವಚೊ ಹರೇಃ |
ಕರ್ತುಂ ಸೀತಾಪ್ರಿಯಾರ್ಥಾಯ ಜಾನನ್ನಪಿ ಮೃಗಂ ಯಯೌ ||೧೩||

ಅನ್ಯಥಾ ಪೂರ್ಣಕಾಮಸ್ಯ ರಾಮಸ್ಯ ವಿದಿತಾತ್ಮನಃ |
ಮೃಗೇಣ ವಾ ಸ್ತ್ರಿಯಾ ವಾಪಿ ಕಿಂ ಕಾರ್ಯಂ ಪರಮಾತ್ಮನಃ ||೧೪||

ಕದಾಚಿದ್ದೃಶ್ಯತೇಭ್ಯಾಶೆ ಕ್ಷಣಂ ಧಾವತಿ ಲೀಯತೆ |
ದೃಶ್ಯತೆ ಚ ತತೋ ದೂರಾದೇವಂ ರಾಮಮುಪಾಹರತ್ ||೧೫||

ತತೊ ರಾಮೋಪಿ ವಿಜ್ಞಾಯ ರಾಕ್ಷಸೋಯಮಿತಿ ಸ್ಫುಟಂ |
ವಿವ್ಯಾಧ ಶರಮಾದಾಯ ರಾಕ್ಷಸಂ ಮೃಗರೂಪಿಣಂ ||೧೬||

---

ಯಿಂದ ಅನುಗ್ರಹೀತರಾದವರು ಜಗದ್ವ್ಯಾಪಾರವೆಲ್ಲವನ್ನೂ ಪರಮಾತ್ಮನ ವಿಲಾಸವೆನ್ನುವರು, ಸತ್ವಪ್ರಧಾನವಾದ ಮಾಯಾಶಕಿಯಿಂದ ಅನುಗ್ರಹೀತರಾದವರು ಸಾಕ್ಷಿಯಾದ ರಾಮನಿಗಿದು ವಿಲಾಸವೆನ್ನುವರು. ರಜಸ್ತಮಃಪ್ರಧಾನವಾದ ಮಾಯೆಯಿಂದ ಹಿಡಿಯಲ್ಪಟ್ಟವರು ರಾಮನು ತಮ್ಮಂತೆಯೇ ಒಬ್ಬ ಮನುಷ್ಯನೆಂದು ತಿಳಿದು ನಾನಾ ಪ್ರಕಾರವಾಗಿ ಹೇಳುವರು ||೧೨||

ತಿಳಿದವನಾದಾಗ್ಯೂ ಸೀತೆಗೆ ಪ್ರಿಯವಾದ ಮೃಗವನ್ನು ತರುವುದಕ್ಕಾಗಿ ಹೋದವನಾದ ಕಾರಣ ಭಗವಂತನಾದ ಹರಿಯು ಭಕ್ತರಲ್ಲಿ ದಯಾವಂತನೆಂಬ ಮಾತು ಸತ್ಯವಾದುದು ||೧೩||

ಹಾಗಲ್ಲದೆ ತಿಳಿಯಲ್ಪಟ್ಟ ಸ್ವರೂಪವುಳ್ಳವನಾದುದರಿಂದ ಪೂರ್ಣಕಾಮನಾದ ಪರಮಾತ್ಮನಾದ ಶ್ರೀರಾಮನಿಗೆ ಮೃಗದಿಂದಲಾಗಲೀ, ಸ್ತ್ರೀಯಿಂದಲಾಗಲೀ ಏನು ಕಾರ್ಯವು. ಭಕ್ತರ ಇಷ್ಟಾನುಸಾರವಾಗಿ ನಡೆವನೆಂದು ಮುಖ್ಯ ತಾತ್ಪರ್ಯ ||

ಆ ಮೃಗವಾದರೋ ಒಂದುಕ್ಷಣ ಸಮೀಪದಲ್ಲಿ ಕಾಣುವುದು, ಒಂದುಕ್ಷಣ ಓಡುವುದು, ಮರೆಯಾಗುವುದು, ದೂರದಲ್ಲಿ ಕಾಣಿಸಿಕೊಳ್ಳುವುದು, ಹೀಗೆ ಮಾಡುತ್ತಾ ರಾಮನನ್ನು ಬಹುದೂರಕ್ಕೆ ಎಳೆದುಕೊಂಡುಹೋಯಿತು ||೧೫||

ಬಳಿಕ ರಾಮನು ಇವನು ರಾಕ್ಷಸನೆಂದು ಸ್ಪಷ್ಟವಾಗಿ ತಿಳಿದು, ಬಾಣವನ್ನು ತೆಗೆದು ಮೃಗರೂಪಧಾರಿಯಾದ ಆ ರಾಕ್ಷಸನನ್ನು ಹೊಡೆದನು ||೧೬||

ಪಪಾತ ರುಧಿರಾಕ್ತಾಸ್ಯೋ ಮಾರೀಚಃ ಪೂರ್ವರೂಪಧೃಕ್ |
ಹಾ ಹತೋಸ್ಮಿ ಮಹಾಬಾಹೋ ತ್ರಾಹಿ ಲಕ್ಷ್ಮಣ ಮಾಂ ದ್ರುತಂ ||
ಇತ್ಯುಕ್ತ್ವಾ ರಾಮವದ್ವಾಚಾ ಪಪಾತ ರುಧಿರಾಶನಃ ||೧೭||

ಯನ್ನಾಮಾಜ್ಞೋಽಪಿ ಮರಣೇ ಸ್ಮೃತ್ವಾ ತತ್ಸಾಮ್ಯಮಾಪ್ನುಯಾತ್ |
ಕಿಮುತಾಗ್ರೇ ಹರಿಂ ಪಶ್ಯಂಸ್ತೇನೈವ ನಿಹತೋಽಸುರಃ ||೧೮||

ತದ್ದೇಹಾದುತ್ಥಿತಂ ತೇಜಃ ಸರ್ವಲೋಕಸ್ಯ ಪಶ್ಯತಃ |
ರಾಮಮೇವಾವಿಶದ್ದೇವಾ ವಿಸ್ಮಯಂ ಪರಮಂ ಯಯುಃ ||೧೯||

ಕಿಂ ಕರ್ಮ ಕೃತ್ವಾ ಕಿಂ ಪ್ರಾಪ್ತಃ ಪಾತಕೀ ಮುನಿಹಿಂಸಕಃ |
ಅಥವಾ ರಾಘವಸ್ಯಾಯಂ ಮಹಿಮಾ ನಾತ್ರ ಸಂಶಯಃ ||೨೦||

ರಾಮಬಾಣೇನ ಸಂವಿದ್ಧಃ ಪೂರ್ವಂ ರಾಮಮನುಸ್ಮರನ್ |
ಭಯಾತ್ಸರ್ವಂ ಪರಿತ್ಯಜ್ಯ ಗೃಹವಿತ್ತಾದಿಕಂ ಚ ಯತ್ ||೨೧||

---

ಆ ಮಾರೀಚನು ರಕ್ತದಿಂದ ನೆನೆಯಲ್ಪಟ್ಟು ಪೂರ್ವದ ರೂಪವನ್ನು ತಾಳಿ ಕೆಳಗೆ ಬಿದ್ದನು. ಬೀಳುವಾಗ ಹಾ ನಾನು ಹೊಡೆಯಲ್ಪಟ್ಟೆನು. ಹಾ ಮಹಾ ಬಾಹುವಾದ ಲಕ್ಷ್ಮಣನೇ ಜಾಗ್ರತೆಯಾಗಿ ನನ್ನನ್ನು ರಕ್ಷಿಸು ಎಂದು ರಾಮನ ಧ್ವನಿಯಂತೆಯೇ ಮಾತನಾಡಿ ಆ ರಾಕ್ಷಸನು ಬಿದ್ದನು ||೧೭||

ತಿಳಿಯದವನಾದರೂ ಯಾವನು ರಾಮನಾಮವನ್ನು ಮರಣಕಾಲದಲ್ಲಿ ಸ್ಮರಿಸಿ ಅವನ ಸಾರೂಪ್ಯವನ್ನು ಪಡೆವನೋ, ಅವನಿಂದಲೇ ಹೊಡೆಯಲ್ಪಟ್ಟು ಆ ಹರಿಯನ್ನು ಎದುರಿಗೆ ನೋಡುತ್ತಾ ಸತ್ತವನು ಮುಕ್ತನಾಗುವನೆನ್ನುವಲ್ಲಿ ಹೇಳುವುದೇನು ||೧೮||

ಆ ಮಾರೀಚನ ಶರೀರದಿಂದ ಎದ್ದ ತೇಜಸ್ಸು ಸಮಸ್ತ ಲೋಕವೂ ನೋಡುತ್ತಿರುವ ಸಮಯದಲ್ಲಿ ರಾಮನನ್ನೇ ಸೇರಲು, ದೇವತೆಗಳು ಇದನ್ನು ನೋಡಿ ಆಶ್ಚರ್ಯಪಟ್ಟರು ||೧೯||

ಮುನಿಗಳಿಗೆ ಹಿಂಸಕನಾದುದರಿಂದ ಮಹಾಪಾಪಿಯಾದ ಈ ಮಾರೀಚನು ಯಾವ ಕರ್ಮವನ್ನು ಮಾಡಿ ಯಾವುದನ್ನು ಪಡೆದನು? ಅಥವಾ ಮಹಾ ಪಾಪಿ ಯನ್ನೂ ಕೂಡ ಸರ್ವೋತ್ತಮನೆನಿಸಿದುದು ರಾಮಮಹಿಮೆಯೇ ಎಂಬ ವಿಚಾರದಲ್ಲಿ ಸಂದೇಹವಿಲ್ಲ ||೨೦||

ಪೂರ್ವದಲ್ಲಿ ರಾಮಬಾಣದಿಂದ ಹೊಡೆಯಲ್ಪಟ್ಟ ಮಾರೀಚನು ರಾಮನನ್ನು ಧ್ಯಾನಿಸುತ್ತಾ ಐಶ್ವರ್ಯವೆಲ್ಲವನ್ನೂ ಬಿಟ್ಟು ಭಯದಿಂದ ||೨೧||

ಹೃದಿ ರಾಮಂ ಸದಾ ಧ್ಯಾತ್ವಾ ನಿರ್ಧೂತಾಶೇಷಕಲ್ಮಷಃ |
ಅಂತೇ ರಾಮೇಣ ನಿಹತಃ ಪಶ್ಯನ್ರಾಮಮವಾಪ ಸಃ ||೨೨||

ದ್ವಿಜೋ ವಾ ರಾಕ್ಷಸೋ ವಾಪಿ ಪಾಪೀ ವಾ ಧರ್ಮಕೋಪಿ ವಾ |
ತ್ಯಜನ್ಕಳೇಬರಂ ರಾಮಂ ಸ್ಮೃತ್ವಾ ಯಾತಿ ಪರಂ ಪದಂ |
ಇತಿತೇನ್ಯೋನ್ಯಮಾಭಾಷ್ಯ ತತೋ ದೇವಾ ದಿವಂ ಯಯುಃ ||೨೩||

ರಾಮಸ್ತು ಚಿಂತಯಾಮಾಸ ಪ್ರಿಯಮಾಣೋಸುರಾಧಮಃ |
ಹಾ ಲಕ್ಷ್ಮಣೇತಿ ಮದ್ವಾಕ್ಯಮನುಕುರ್ವನ್ಮಮಾರ ಕಿಂ? ||೨೪||

ಶ್ರುತ್ವಾ ಮದ್ವಾಕ್ಯಸದೃಶಂ ವಾಕ್ಯಂ ಸೀತಾಪಿ ಕಿಂ ಭವೇತ್ |
ಇತಿ ಚಿಂತಾಪರೀತಾತ್ಮಾ ರಾಮೋ ದೂರಾನ್ನ್ಯವರ್ತತ ||೨೫||

---

ಹೃದಯದಲ್ಲಿ ಶ್ರೀರಾಮನನ್ನು ಸರ್ವದಾ ಧ್ಯಾನಿಸಿ ಸಮಸ್ತ ಪಾಪಗಳನ್ನೂ ಕಳೆದುಕೊಂಡನು. ಆದುದರಿಂದಲೇ ಅಂತ್ಯಕಾಲದಲ್ಲಿ ರಾಮನಿಂದ ಹೊಡೆಯಲ್ಪಟ್ಟ ರಾಮನನ್ನು ನೋಡುತ್ತ ರಾಮನನ್ನೇ ಸೇರಿದನು. ಇಲ್ಲಿ ಧ್ಯಾನಾದಿಗಳಿಂದ ಸೂಕ್ಷ್ಮ ಶರೀರ ಪಾಪಕ್ಷಯವೂ, ಹೊಡೆತದಿಂದ ರಾಕ್ಷಸದೇಹ ಕ್ಷಯವೂ ಸಹ ಆದ್ದರಿಂದ ಮುಕ್ತಿಯೆಂದು ತಿಳಿಯುವುದು ||೨೨||

ಬ್ರಾಹ್ಮಣನಾಗಲೀ, ರಾಕ್ಷಸನಾಗಲೀ, ಪಾಪಿಯಾಗಲೀ, ಧರ್ಮವಿಲ್ಲದವನಾಗಲೀ, ದೇಹವನ್ನುಬಿಡುವಾಗ ರಾಮನನ್ನುಯಾರು ಸ್ಮರಿಸಿದರೂ ಪರಮಪದವನ್ನು ಪಡೆಯುವಲ್ಲಿ, ಅಂತ್ಯಕಾಲದಲ್ಲಿ ನಾಮಸ್ಮರಣೆಯಿಂದ ಹೋದ ಪಾಪವು, ಶರೀರವೇ ಹೋದುದರಿಂದ ಮರಳಿ ಸಂಬಂಧಿಸಲಿಲ್ಲವೆಂತಲೂ, ಆದರಿಂದ ಪರಮಪ್ರಾಪ್ತಿಯೆಂತಲೂ, ತಾತ್ಪರ್ಯ. ಈ ರೀತಿ ದೇವತೆಗಳು ಪರಸ್ಪರ ಮಾತನಾಡುತ್ತಾ ಸ್ವರ್ಗವನ್ನು ಸೇರಿದರು ||೨೩||

ಇತ್ತ, ಮಾಯಾಮನುಷ್ಯನಾದ ರಾಮನು, ಸಾಯುವಕಾಲದಲ್ಲಿ ಈ ಅಸುರಾಧಮನು ಹಾ ಲಕ್ಷ್ಮಣಾ ಎಂದು ನನ್ನಂತೆಯೇ ಕೂಗುತ್ತಾ ಏಕೆ ಸತ್ತನೆಂದು, ಈ ವಿಚಾರವಾಗಿಯೇ ಬಹಳ ಯೋಚಿಸಿದನು ||೨೪||

ನನ್ನ ಮಾತಿನಂತೆಯೇ ಇರುವ ಈ ಮಾತನ್ನು ಕೇಳಿ ಸೀತೆಯು ಏನಾಗುವಳೋ ಎಂಬ ಆಲೋಚನೆಯಿಂದ ರಾಮನು ದೂರದಿಂದ ಹಿಂತಿರುಗಿದನು. ಇಲ್ಲಿ ನೀನು ಅಜ್ಞಾನಿಯಾಗಿರೆಂದು ಸನತ್ಕುಮಾರನ ಶಾಪವನ್ನು ವಿಷ್ಣುವು ಅಂಗೀಕರಿಸಿದ್ದರಿಂದ

ಸೀತಾ ತದ್ಭಾಷಿತಂ ಶ್ರುತ್ವಾ ಮಾರೀಚಸ್ಯ ದುರಾತ್ಮನಃ ।
ಭೀತಾತಿದುಃಖಸಂವಿಗ್ನಾ ಲಕ್ಷ್ಮಣಂ ತ್ವಿದಮಬ್ರವೀತ್ ||೨೬||

ಗಚ್ಛ ಲಕ್ಷ್ಮಣ ವೇಗೇನ ಭ್ರಾತಾ ತೇಽಸುರಪೀಡಿತಃ ।
ಹಾ ಲಕ್ಷ್ಮಣೇತಿ ವಚನಂ ಭ್ರಾತುಸ್ತೇ ನ ಶೃಣೋಷಿ ಕಿಂ ||೨೭||

ತಾಮಾಹ ಲಕ್ಷ್ಮಣೋ ದೇವಿ ರಾಮವಾಕ್ಯಂ ನ ತದ್ಭವೇತ್ ।
ಯಃ ಕಶ್ಚಿದ್ರಾಕ್ಷಸೋ ದೇವಿ ಮ್ರಿಯಮಾಣೋ ಬ್ರವೀದ್ವಚಃ ||೨೮||

ರಾಮಸ್ತ್ರೈಲೋಕ್ಯಮಪಿ ಯಃ ಕ್ರುದ್ಧೋ ನಾಶಯತಿ ಕ್ಷಣಾತ್ ।
ಸ ಕಥಂ ದೀನವಚನಂ ಭಾಷತೇವರಪೂಜಿತಃ ||೨೯||

ಕ್ರುದ್ಧಾ ಲಕ್ಷ್ಮಣಮಾಲೋಕ್ಯ ಸೀತಾ ಬಾಷ್ಪ ವಿಲೋಚನಾ ।
ಪ್ರಾಹ ಲಕ್ಷ್ಮಣ ದುರ್ಬುದ್ಧೇ ಭ್ರಾತುರ್ವ್ಯಸನಮಿಚ್ಛಸಿ ||೩೦||

---

ಅಜ್ಞಾನವು ಆಗಿಂದಾಗ್ಯೆ ಬರುವುದೆಂತಲಾಗಲೀ, ಆದನ್ನಿವನು ಗ್ರಹಿಸುವನೆಂತಲಾಗಲೀ ತಿಳಿಯುವುದು ||೨೫||

ಸೀತೆಯು ಆ ದುರಾತ್ಮನಾದ ಮಾರೀಚನ ಮಾತನ್ನು ಕೇಳಿ ಭಯಪಟ್ಟು ದುಃಖದಿಂದ ಲಕ್ಷ್ಮಣನನ್ನು ಕುರಿತು ||೨೬||

ಎಲೈ ಸೌಮಿತ್ರಿಯೇ ! ಹಾ ಲಕ್ಷ್ಮಣಾ, ಎಂದು ಕೂಗಿದ ನಿನ್ನ ಅಣ್ಣನ ಮಾತನ್ನು ನೀನು ಕೇಳಲಿಲ್ಲವೆ ? ಆದುದರಿಂದ ನಿನ್ನ ಅಣ್ಣನು ಸುರವಿರೋಧಿಯಾದುದರಿಂದ ಅಸುರನೆನಿಸುವ ರಾಕ್ಷಸನಿಂದ ಪೀಡಿತನಾಗಿರುವನೆಂದು ತೋರುತಲಿದೆ. ಆದುದರಿಂದ ಬೇಗನೆ ಅವನ ಸಹಾಯಕ್ಕೆ ಹೊರಡು ||೨೭||

ಈರೀತಿ ಹೇಳುವ ಸೀತೆಯನ್ನು ಕುರಿತು ಲಕ್ಷ್ಮಣನು ಎಲೌ ದೇವಿಯೇ, ಹಾ ಲಕ್ಷ್ಮಣಾ ಎಂಬ ಮಾತು ರಾಮನದಾಗಲಾರದು. ಎಲೌ ದೇವಿಯೇ ರಾಮನ ಪ್ರಹಾರದಿಂದ ಸಾಯುತ್ತಿರುವ ಯಾವನೋ ಒಬ್ಬ ರಾಕ್ಷಸನು ಆರೀತಿಯಾಗಿ ಕೂಗಿರುವನು ||೨೮||

ಯಾವ ರಾಮನು ಕುಪಿತನಾದರೆ ಮೂಜಗವನ್ನೂ ಕ್ಷಣಮಾತ್ರದಲ್ಲಿ ನಾಶಪಡಿಸುವನೋ, ದೇವರಿಂದ ಪೂಜಿತನಾದ ಆ ರಾಮನು ದೀನವಾದ ಮಾತನ್ನೇಕೆ ಆಡುವನು ||೨೯||

ಎಂದು ಲಕ್ಷ್ಮಣನು ಹೇಳಲು, ಸೀತೆಯು ಕೋಪದಿಂದಲೂ, ಕಣ್ಣೀರಿನಿಂ

ಪ್ರೇಷಿತೋ ಭರತೋನೈವ ರಾಮನಾಶಾಭಿಕಾಂಕ್ಷಿಣಾ |
ಮಾಂ ನೇತುಮಾಗತೋಸಿ ತ್ವಂ ರಾಮನಾಶ ಉಪಸ್ಥಿತೇ |
ನ ಪ್ರಾಪ್ಸ್ಯಸೆ ತ್ವಂ ಮಾಮದ್ಯ ಪಶ್ಯ ಪ್ರಾಣಾಂಸ್ತ್ಯಜಾಮ್ಯಹಂ ||೩೧||

ನ ಜಾನಾತೀದೃಶಂ ರಾಮಸ್ತ್ವಾಂ ಭಾರ್ಯಾಹರಣೋದ್ಯತಂ |
ರಾಮಾದನ್ಯಂ ನ ಪಶ್ಯಾಮಿ ತ್ವಾಂ ವಾ ಭರತ ಮೇವ ವಾ |
ಇತ್ಯುಕ್ತ್ವಾ ವಧ್ಯಮಾನಾ ಸಾ ಸ್ವಬಾಹುಭ್ಯಾಂ ರುರೋದಹ ||೩೨||

ತಚ್ಛ್ರುತ್ವಾ ಲಕ್ಷ್ಮಣಃ ಕರ್ಣೌ ಪಿಧಾಯಾತೀವ ದುಃಖಿತಃ |
ಮಾಮೈವಂ ಭಾಷಸೆ ಚಂಡಿ ಧಿಕ್ತ್ವಾಂ ನಾಶಮುಪೈಷ್ಯಸಿ ||೩೩||

ಇತ್ಯುಕ್ತ್ವಾ ವನದೇವೀಭ್ಯಃ ಸಮರ್ಪ್ಯ ಜನಕಾತ್ಮಜಾಂ |
ಯಯೌ ದುಃಖಾತಿ ಸಂವಿಗ್ನೋ ರಾಮಮೇವ ಶನೈಶ್ಶನೈಃ ||೩೪||

ದಲೂ ಕೂಡಿ ಎಲಾ ದುರ್ಮತಿಯಾದ ಲಕ್ಷ್ಮಣನೇ ಅಣ್ಣನಿಗೆ ವ್ಯಸನಬರುವುದನ್ನು ನೀನು ಇಚ್ಛಿಸುತ್ತೀಯೆ ||೩೦||

ರಾಮನ ನಾಶವನ್ನಪೇಕ್ಷಿಸುವ ನೀನು ಭರತನಿಂದಲೇ ಕಳುಹಿಸಲ್ಪಟ್ಟಿರುವೆ. ರಾಮನು ನಾಶವಾಗಲು ನನ್ನನ್ನು ನೀನು ಪಡೆಯಬೇಕೆಂದು ಬಂದಿರುವೆ, ನನ್ನನ್ನು ನೀನು ಪಡೆಯಲಾರೆ, ಈಗ ನೋಡು ನಾನು ಪ್ರಾಣವನ್ನು ಬಿಡುವೆನು ||೩೧||

ಈರೀತಿಯಾಗಿ ಪತ್ನಿಯನ್ನು ಕದಿಯಲೋಸುಗ ಬಂದಿರುವ ನಿನ್ನನ್ನು ರಾಮನು ಅರಿಯನು. ರಾಮನಿಗೆ ಅನ್ಯನಾದ ನಿನ್ನನ್ನಾಗಲೀ, ಭರತನನ್ನಾಗಲೀ ನಾನು ನೋಡೆನು. ಎಂದು ಹೇಳಿ ಕೈಗಳಿಂದ ಹೊಡಕೊಳ್ಳುತ್ತಾ ಹಾ ಎಂದು ರೋಧನ ಮಾಡಿದಳು ||೩೨||

ಲಕ್ಷ್ಮಣನು ಆ ಮಾತನ್ನು ಕೇಳಿ ಅತ್ಯಂತ ದುಃಖಪಟ್ಟು ಕಿವಿಯನ್ನು ಮುಚ್ಚಿಕೊಂಡು ಎಲಾ ಚಂಡಿಯೇ ನನ್ನನ್ನು ನೀನು ಈರೀತಿ ಹ್ಯಾಗೆ ಹೇಳುವೆ? ನಿನ್ನನ್ನು ಸುಡಬೇಕು. ನೀನು ನಾಶವನ್ನು ಹೊಂದುವೆ ||೩೩||

ಎಂದು ಹೇಳಿ ವನದೇವತೆಗಳಿಗೆ ನೋಡಿಕೊಂಡಿರುವಂತೆ ಹೇಳಿ ಸೀತೆಯನ್ನು ಒಪ್ಪಿಸಿ ಲಕ್ಷ್ಮಣನು ಅತಿ ದುಃಖದಿಂದ ಪೀಡಿತನಾಗಿ ಮೆಲ್ಲಮೆಲ್ಲನೆ ರಾಮನ ಸಮೀಪವನ್ನು ಸೇರಿದನು ||೩೪||

ತತೋಂತರಂ ಸಮಾಲೋಕ್ಯ ರಾವಣೋ ಭಿಕ್ಷುವೇಷಧೃಕ್ |
ಸೀತಾ ಸಮೀಪಮಗಮತ್ಸ್ಫುರದ್ದಂಡಕಮಂಡಲುಃ ||೩೫||

ಸೀತಾ ತಮೇವಲೋಕ್ಯಾಶು ನತ್ವಾ ಸಂಪೂಜ್ಯ ಭಕ್ತಿತಃ |
ಕಂದಮೂಲಫಲಾದೀನಿ ದತ್ವಾ ಸ್ವಾಗತ ಮಬ್ರವೀತ್ ||೩೬||

ಮುನೇ ಭುಂಕ್ಷ್ವ ಫಲಾದೀನಿ ವಿಶ್ರಮಸ್ವ ಯಥಾಸುಖಂ |
ಇದಾನೀಮೇವ ಮೇ ಭರ್ತಾ ಹ್ಯಾಗಮಿಷ್ಯತಿ ತೇ ಪ್ರಿಯಂ |
ಕರಿಷ್ಯತಿ ವಿಶೇಷೇಣ ತಿಷ್ಠ ತ್ವಂ ಯದಿ ರೋಚತೇ ||೩೭||

ಭಿಕ್ಷುಃ ||

ಕಾ ತ್ವಂ ಕಮಲಪತ್ರಾಕ್ಷಿ ಕೋ ವಾ ಭರ್ತಾ ತವಾನಘೇ |
ಕಿಮರ್ಥಮತ್ರ ತೇ ವಾಸೋ ವನೇ ರಾಕ್ಷಸಸೇವಿತೇ |
ಬ್ರೂಹಿ ಭದ್ರೇ ತತಸ್ಸರ್ವಂ ಸ್ವವೃತ್ತಾಂತಂ ನಿವೇದಯ ||೩೮||

ಸೀತಾ ||

ಅಯೋಧ್ಯಾಧಿಪತಿಶ್ರೀಮಾನ್ರಾಜಾ ದಶರಥೋ ಮಹಾನ್ |
ತಸ್ಯ ಜ್ಯೇಷ್ಠಃ ಸುತೋ ರಾಮಃ ಸರ್ವಲಕ್ಷಣಲಕ್ಷಿತಃ ||೩೯||

---

ಬಳಿಕ ಸಮಯವನ್ನು ನೋಡಿ ರಾವಣನು ಸನ್ಯಾಸಿಯ ವೇಷವನ್ನು ಧರಿಸಿ ಪ್ರಕಾಶಮಾನವಾದ ದಂಡಲುಗಳುಳ್ಳವನಾಗಿ ಸೀತೆಯ ಸಮೀಪಕ್ಕೆ ಬಂದನು ||೩೫||

ಸೀತೆಯು ಇವನನ್ನು ನೋಡಿ ಜಾಗ್ರತೆಯಾಗಿ ನಮಿಸಿ ಭಕ್ತಿಯಿಂದ ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ, ಕಂದಮೂಲಫಲಾದಿಗಳನ್ನೊಪ್ಪಿಸಿ ಸುಖಾಗಮ ಪ್ರಶ್ನ ಪೂರ್ವಕವಾಗಿ ಹೇಳಿದಳು ||೩೬||

ಎಲೈ ಮುನಿಯೇ! ಫಲಾದಿಗಳನ್ನು ಭಕ್ಷಿಸು, ಸುಖವಾಗಿ ವಿಶ್ರಮಿಸಿಕೋ, ನನ್ನ ಪತಿಯು ಈಗಲೇ ಬರುವನು, ನಿನಗೆ ಬೇಕಾದುದನ್ನೆಲ್ಲಾ ಅಧಿಕವಾಗಿ ಆತನೇ ಮಾಡುವನು ||೩೭||

ಎಂದು ಸೀತೆಯು ಹೇಳಲು, ಸನ್ಯಾಸಿಯು-ಎಲ ನಿರ್ದೋಷಳಾದ ನಳಿನ ದಳಾಕ್ಷಿಯೇ! ನೀನು ಯಾರು? ನಿನ್ನ ಪತಿಯಾದರೂ ಯಾವನು? ರಾಕ್ಷಸರಿಂದ ಆಶ್ರಯಿಸಲ್ಪಟ್ಟಿರುವ ಈ ವನದಲ್ಲಿ ಏನುಕಾರಣ ವಾಸಮಾಡುತ್ತಿರುವೆ ಹೇಳು? ಬಳಿಕ ನನ್ನ ವೃತ್ತಾಂತವೆಲ್ಲವನ್ನೂ ತಿಳಿಸುವೆನು ||೩೮||

ಎಂದು ಸನ್ಯಾಸಿಯು ಹೇಳಲು; ಅದಕ್ಕೆ ಸೀತೆಯು—ಅಯೋಧ್ಯಾಪುರಕ್ಕೆ

ತಸ್ಯಾಹಂ ಧರ್ಮತಃ ಪತ್ನೀ ಸೀತಾ ಜನಕನಂದಿನೀ |
ತಸ್ಯ ಭ್ರಾತಾ ಕನೀಯಾಂಶ್ಚ ಲಕ್ಷ್ಮಣೋ ಭ್ರಾತೃವತ್ಸಲಃ ||೪೦||
ಪಿತುರಾಜ್ಞಾಂ ಪುರಸ್ಕೃತ್ಯ ದಂಡಕೇ ವಸ್ತುಮಾಗತಃ |
ಚತುರ್ದಶ ಸಮಾಸ್ತ್ವಂತು ಜ್ಞಾತುಮಿಚ್ಛಾಮಿ ಮೇ ವದ ||೪೧||
ಭಿಕ್ಷುಃ ||
ಪೌಲಸ್ತ್ಯತನಯೋಽಹಂ ತು ರಾವಣೋ ರಾಕ್ಷಸಾಧಿಪಃ |
ತ್ವತ್ಕಾಮಪರಿತಪ್ತೋಽಹಂ ತ್ವಾಂ ನೇತುಂ ಪುರ ಆಗತಃ ||೪೨||
ಮುನಿವೇಷೇಣ ರಾಮೇಣ ಕಿಂ ಕರಿಷ್ಯಸಿ ಮಾಂ ಭಜ |
ಭುಂಕ್ಷ್ವ ಭೋಗಾನ್ಮಯಾ ಸಾರ್ಧಂ ತ್ಯಜ ದುಃಖಂ ವನೋದ್ಭವಂ ||೪೩||
ಶ್ರುತ್ವಾ ತದ್ವಚನಂ ಸೀತಾ ಭೀತಾ ಕಿಂಚಿದುವಾಚ ತಂ |
ಯದ್ಯೇವಂ ಭಾಷಸೇ ಮಾಂ ತ್ವಂ ನಾಶಮೇಷ್ಯಸಿ ರಾಘವಾತ್ ||೪೪||

---

ಅಧಿಪತಿಯಾದ ಶ್ರೀಮಂತನಾದ ದಶರಥನೆಂಬ ಮಹಾರಾಜನಿದ್ದನು. ಸಮಸ್ತ ಲಕ್ಷಣಗಳಿಂದ ಕೂಡಿರುವ ರಾಮನು ಅವನಿಗೆ ಜ್ಯೇಷ್ಠಪುತ್ರನು ಜನಕರಾಯನಿಗೆ ಮಗಳಾದ ಸೀತೆಯೆಂಬ ನಾನು ಆ ರಾಮನ ಧರ್ಮಪತ್ನಿಯು, ಆ ರಾಮನಿಗೆ ಚಿಕ್ಕತಮ್ಮನಾದ ಲಕ್ಷ್ಮಣನು ಭ್ರಾತೃವಾತ್ಸಲ್ಯವುಳ್ಳವನು ||೩೯||

ಆ ಶ್ರೀರಾಮನು ತಂದೆಯ ಆಜ್ಞೆಯನ್ನು ಪುರಸ್ಕರಿಸಿ ಹದಿನಾಲ್ಕುವರ್ಷ ದಂಡಕಾರಣ್ಯದಲ್ಲಿರಲು ಬಂದಿರುವನು, ನಿನ್ನ ವಿಚಾರವನ್ನು ತಿಳಿಯಲು ಇಚ್ಛಿಸುವೆನು, ನನಗೆ ಹೇಳು ||೪೧||

ಎನಲು, ಸನ್ಯಾಸಿಯು—ನಾನು ಪೌಲಸ್ತ್ಯನಿಗೆ ಮಗನಾದ ರಾವಣನೆಂಬ ರಾಕ್ಷಸಾಧಿಪತಿಯು, ನಿನ್ನ ವಿಷಯದಲ್ಲಿ ಕಾಮವಿಕಾರದಿಂದ ತಪ್ತನಾದ ನಾನು ನಿನ್ನನ್ನು ಎತ್ತಿಕೊಂಡು ಹೋಗುವುದಕ್ಕಾಗಿ ನಿನ್ನೆದುರಿಗೆ ಬಂದಿರುವೆನು ||೪೨||

ಮುನಿವೇಷಧಾರಿಯಾದ ರಾಮನನ್ನು ಕಟ್ಟಿಕೊಂಡು ಏನುಮಾಡುವೆ? ನನ್ನನ್ನು ನೀನು ಸೇರಿ ಭೋಗವನ್ನು ಅನುಭವಿಸು, ವನದಲ್ಲಿ ಉಂಟಾದ ದುಃಖವನ್ನು ಬಿಡುವಳಾಗು ||೪೩||

ಎಂದು ಹೇಳಿದ ರಾವಣನ ಮಾತನ್ನು ಕೇಳಿ, ಸೀತೆಯು ಭಯಪಟ್ಟು ಎಲಾ ನೀನು ಈರೀತಿಯಾದ ಮಾತನಾಡಿದರೆ ರಾಮನಿಂದ ನಾಶವನ್ನು ಹೊಂದುವೆ ||೪೪||

ಆಗಮಿಷ್ಯತಿ ರಾಮೋಪಿ ಕ್ಷಣಂ ತಿಷ್ಠ ಸಹಾನುಜಃ |
ಮಾಂ ಕೊ ಧರ್ಷಯಿತುಂ ಶಕ್ತೊ ಹರೇರ್ಭಾರ್ಯಾಂ ಶಶೊ ಯಥಾ ||೪೫||

ರಾಮಬಾಣೈರ್ವಿಭಿನ್ನಸ್ತ್ವಂ ಪತಿಷ್ಯಸಿ ಮಹೀತಲೆ |
ಇತಿ ಸೀತಾವಚಃ ಶ್ರುತ್ವಾ ರಾವಣಃ ಕ್ರೋಧಮೂರ್ಛಿತಃ |
ಸ್ವರೂಪಂ ದರ್ಶಯಾಮಾಸ ಮಹಾಪರ್ವತಸನ್ನಿಭಂ ||೪೬||

ದಶಾಸ್ಯಂ ವಿಂಶತಿಭುಜಂ ಕಾಲಮೇಘಸಮದ್ಯುತಿ |
ತದ್ದೃಷ್ಟ್ವಾ ವನದೇವ್ಯಶ್ಚ ಭೂತಾನಿ ಚ ವಿತತ್ರಸುಃ ||೪೭||

ತತೊ ವಿದಾರ್ಯ ಧರಣೀಂ ನಖೈರುದ್ಧೃತ್ಯ ಬಾಹುಭಿಃ |
ತೋಲಯಿತ್ವಾ ರಥೆ ಕ್ಷಿಪ್ತ್ವಾ ಯಯೌ ಕ್ಷಿಪ್ರಂ ವಿಹಾಯಸಾ ||೪೮||

ಹಾ ರಾಮ ಹಾ ಲಕ್ಷ್ಮಣೇತಿ ರುದತೀ ಜನಕಾತ್ಮಜಾ |
ಭಯೋದ್ವಿಗ್ನಮನಾ ದೀನಾ ಪಶ್ಯಂತೀ ಭುವಮೇವ ಸಾ ||೪೯||

---

ಆ ರಾಮನೂ ಕೂಡ ತಮ್ಮನಿಂದೊಡಗೂಡಿ ಬರುವನು. ಒಂದು ಕ್ಷಣ ಸಿಲ್ಲುವನಾಗು. ಸಿಂಹದ ಹೆಂಗಸನ್ನು ಮೊಲವು ಕೆಣಕುವಂತೆ ನನ್ನನ್ನು ತಿರಸ್ಕರಿಸಿ ಮಾತನಾಡಲು ಯಾವನು ಸಮರ್ಥನು ||೪೫||

ರಾಮಬಾಣದಿಂದ ನೀನು ಭೇದಿಸಲ್ಪಟ್ಟು ಭೂಮಿಯಲ್ಲಿ ಬೀಳುವೆ ಎನಲು. ಆ ಮಾತನ್ನು ಕೇಳಿದ ರಾವಣನು ಕೋಪದಿಂದ ದೊಡ್ಡ ಬೆಟ್ಟಕ್ಕೆ ಸರಿಯಾದ ತನ್ನ ರೂಪವನ್ನು ತೋರಿಸಿದನು ||೪೬||

ಹತ್ತು ಮುಖವೂ ಇಪ್ಪತ್ತು ತೋಳುಗಳೂ ಉಳ್ಳ ಕಾಲಮೇಘಕ್ಕೆ ಸರಿಯಾದ ಕಾಂತಿಯುಳ್ಳ ಅವನ ರೂಪವನ್ನು ನೋಡಿ ವನದೇವತೆಗಳೂ, ಪ್ರಾಣಿಗಳೂ ಕೂಡ ಭಯಪಟ್ಟರು ||೪೭||

ಬಳಿಕ ರಾವಣನು ಉಗುರುಗಳಿಂದ ಭೂಮಿಯನ್ನು ಬಗೆದು ಹಲಗೆಯಂತೆ ಭೂಮಿಯನ್ನು ತೋಳಿನಿಂದೆತ್ತಿ ಅಲ್ಲಾಡಿಸಿ ರಥದಲ್ಲಿಟ್ಟುಕೊಂಡು ಗಗನಮಾರ್ಗವಾಗಿ ಜಾಗ್ರತೆಯಿಂದ ಹೊರಟನು ||೪೮||

ಹಾ ರಾಮನೇ ; ಹಾ ಲಕ್ಷ್ಮಣನೇ ಎಂದು ಅಳುತ್ತಿರುವ ಸೀತೆಯು ಭೂಮಿಯನ್ನೇ ನೋಡುತ್ತ ಭಯದಿಂದ ದೀನಳಾದಳು ||೪೯||

ಶ್ರುತ್ವಾ ತತ್ಕ್ರಂದಿತಂ ದೀನಂ ಸೀತಾಯಾಃ ಪಕ್ಷಿಸತ್ತಮಃ |
ಜಟಾಯುರುತ್ಥಿತಃ ಶೀಘ್ರಂ ನಗಾಗ್ರಾತ್ತೀಕ್ಷ್ಣತುಂಡಕಃ ||೫೦||

ತಿಷ್ಠ ತಿಷ್ಠೇತಿ ತಂ ಪ್ರಾಹ ಕೋ ಗಚ್ಛತಿ ಮಮಾಗ್ರತಃ |
ಮುಷಿತ್ವಾ ಲೋಕನಾಥಸ್ಯ ಭಾರ್ಯಾಂ ಶೂನ್ಯಾದ್ವನಾಲಯಾತ್ |
ಶುನಕೋ ಮಂತ್ರಪೂತಂ ತ್ವಂ ಪುರೋಡಾಶಮಿವಾಧ್ವರೆ ||೫೧||

ಇತ್ಯುಕ್ತ್ವಾ ತೀಕ್ಷ್ಣತುಂಡೇನ ಚೂರ್ಣಯಾಮಾಸತದ್ರಥಂ |
ವಾಹಾನ್ಬಿಭೇದ ಪಾದಾಭ್ಯಾಂ ಚೂರ್ಣಯಾಮಾಸ ತದ್ಧನುಃ ||೫೨||

ತತಃ ಸೀತಾಂ ಪರಿತ್ಯಜ್ಯ ರಾವಣಃ ಖಡ್ಗಮಾದದೆ |
ಚಿಚ್ಛೇದ ಪಕ್ಷೌ ಸರಮರ್ಷಃ ಪಕ್ಷಿರಾಜಸ್ಯ ಧೀಮತಃ ||೫೩||

ಪಪಾತ ಕಿಂಚಿಚ್ಛೇಷೇಣ ಪ್ರಾಣೇನ ಭುವಿ ಪಕ್ಷಿರಾಟ್ |
ಪುನರನ್ಯರಥೇನಾಶು ಸೀತಾಮಾದಾಯ ರಾವಣಃ ||೫೪||

---

ದೀನವಾದ ಸೀತೆಯ ರೋಧನವನ್ನು ಕೇಳಿ ಜಟಾಯುವೆಂಬ ತೀಕ್ಷ್ಣವಾದ ಮೊಗವುಳ್ಳ ಪಕ್ಷಿಶ್ರೇಷ್ಠನು ಜಾಗ್ರತೆಯಾಗಿ ಮರದಮೇಲಿಂದೆದ್ದನು ||೫೦||

ಯಜ್ಞದಲ್ಲಿ ಮಂತ್ರದಿಂದ ಪವಿತ್ರವಾದ ಪುರೋಡಾಶವನ್ನು ನಾಯಿಯು ಎತ್ತಿಕೊಂಡು ಹೋದಂತೆ ನೀನು ಯಾರೂ ಇಲ್ಲದ ಶೂನ್ಯವಾದ ಆಶ್ರಮದಿಂದ ಲೋಕನಾಥನ ಪತ್ನಿಯನ್ನು ಕದ್ದುಕೊಂಡು ಹೋಗುತ್ತಿರುವೆ, ನಿಲ್ಲುನಿಲ್ಲೆಂದು ಆ ರಾವಣನಿಗೆ ಹೇಳಿ ||೫೧||

ತೀಕ್ಷ್ಣವಾದ ಕೊಕ್ಕಿನಿಂದ ರಾವಣನ ರಥವನ್ನು ಚೂರುಚೂರಾಗಿ ಮಾಡಿದನು. ಕಾಲುಗಳಿಂದ ಕುದುರೆಗಳನ್ನು ಸೀಳಿದನು. ಅವನ ಧನುಸ್ಸನ್ನು ಚೂರು ಚೂರಾಗಿ ಮಾಡಿದನು ||೫೨||

ಬಳಿಕ ರಾವಣನು ಸೀತೆಯನ್ನು ಬಿಟ್ಟು ಕತ್ತಿಯನ್ನು ತೆಗೆದುಕೊಂಡು ಕೋಪದಿಂದ ಕೂಡಿ ಬುದ್ಧಿವಂತನಾದ ಪಕ್ಷಿರಾಜನ ರೆಕ್ಕೆಗಳನ್ನು ಕತ್ತರಿಸಿದನು ||

ಆ ಜಟಾಯುವು ಕೊಂಚ ಮಿಕ್ಕಿರುವ ಪ್ರಾಣದಿಂದ ಭೂಮಿಯಲ್ಲಿ ಬಿದ್ದನು. ಬಳಿಕ ರಾವಣನು ಪೂರ್ವದಂತೆ ಬೇರೆ ರಥದಮೇಲೆ ಸೀತೆಯನ್ನು ತೆಗೆದುಕೊಂಡು ಹೋದನು ||೫೪||

ಕ್ರೋಶಂತೀ ರಾಮ ರಾಮೇತಿ ತ್ರಾತಾರಂ ನಾಧಿಗಚ್ಛತೀ |
ಹಾ ರಾಮ ಹಾ ಜಗನ್ನಾಥ ಮಾಂ ನ ಪಶ್ಯಸಿ ದುಃಖಿತಾಂ |
ರಕ್ಷಸಾ ನೀಯಮಾನಾಂ ಸ್ವಾಂ ಭಾರ್ಯಾಂ ಮೋಚಯ ರಾಘವ ||೫೫||

ಹಾ ಲಕ್ಷ್ಮಣ ಮಹಾಭಾಗ ತ್ರಾಹಿ ಮಾಮಪರಾಧಿನೀಂ |
ವಾಕ್ಶರೇಣ ಹತಸ್ತ್ವಂ ಮೇ ಕ್ಷಂತುಮರ್ಹಸಿ ದೇವರ ||೫೬||

ಇತ್ಯೇವಂ ಕ್ರೋಶಮಾನಾಂ ತಾಂ ರಾಮಾಗಮನಶಂಕಯಾ |
ಜಗಾಮ ವಾಯುವೇಗೇನ ಸೀತಾಮಾದಾಯ ಸತ್ವರಃ ||೫೭||

ವಿಹಾಯಸಾ ನೀಯಮಾನಾ ಸೀತಾಪಶ್ಯದಧೋಮುಖೀ |
ಪರ್ವತಾಗ್ರ ಸ್ಥಿತಾನ್ಪಂಚ ವಾನರಾನ್ವಾರಿಜಾನನಾ ||೫೮||

ಉತ್ತರೀಯಾರ್ಧಖಂಡೇನ ವಿಮುಚ್ಯಾಭರಣಾದಿಕಂ |
ಬಧ್ವಾ ಚಿಕ್ಷೇಪ ರಾಮಾಯ ಕಥಯಂತ್ವಿತಿ ಪರ್ವತೆ ||೫೯||

---

ರಾಮ ರಾಮ ಎಂದು ಕೂಗುತ್ತಾ ರಕ್ಷಕರನ್ನು ಕಾಣದಿರುವ ಸೀತೆಯು ಹಾ ರಾಮನೇ! ಹಾ ಜಗನ್ನಾಥನೇ! ದುಃಖಿತಳಾದ ನನ್ನನ್ನು ನೀನು ನೋಡದಿರುವೆ, ಎಲೈ ಶ್ರೀರಾಮನೇ ರಾಕ್ಷಸನಿಂದ ಒಯ್ಯಲ್ಪಡುತ್ತಿರುವ ನಿನ್ನ ನಿಜ ಪತ್ನಿಯಾದ ನನ್ನನ್ನು ಬಿಡಿಸುವನಾಗು ||೫೫||

ಹಾ ಮಹಾ ಭಾಗ್ಯಶಾಲಿಯಾದ ಲಕ್ಷ್ಮಣನೇ! ಅಪರಾಧವನ್ನು ಮಾಡಿದ ನನ್ನನ್ನು ರಕ್ಷಿಸುವನಾಗು, ಎಲೈ ಮೈದನೇ ನನ್ನ ವಾಗ್ರೂಪವಾದ ಬಾಣದಿಂದ ನೀನು ಹೊಡೆಯಲ್ಪಟ್ಟಿಯಲ್ಲವೇ ? ಅದನ್ನು ಕ್ಷಮಿಸುವನಾಗು ||೫೬||

ಎಂದು ಈಪ್ರಕಾರವಾಗಿ ರಾಮನು ಬರುವನೆಂಬ ಸಂದೇಹದಿಂದ ಕೂಗಿಕೊಳ್ಳುತ್ತಿರುವ ಸೀತೆಯನ್ನು ಎತ್ತಿಕೊಂಡು ರಾವಣನು ವಾಯುವೇಗದಿಂದ ಹೊರಟನು ||೫೭||

ಗಗನಮಾರ್ಗದಲ್ಲಿ ಕೊಂಡುಹೋಗುತ್ತಿರುವ ಕಮಲಮುಖಿಯಾದ ಸೀತೆಯು ಕೆಳಮೊಗಳಾಗಿ ಪರ್ವತದ ಮೇಲುಗಡೆಯಲ್ಲಿರುವ ಐದು ಕಪಿಗಳನ್ನು ನೋಡಿದಳು ||೫೮||

ಆಭರಣಗಳಲ್ಲಿ ಮುಖ್ಯವಾದುದನ್ನು ತೆಗೆದು ಮೇಲುಹೊದಿಕೆಯ ಅರ್ಧ

ತತಃ ಸಮುದ್ರಮುಲ್ಲಂಘ್ಯ ಲಂಕಾಂ ಗತ್ವಾ ಸ ರಾವಣಃ |
ಸ್ವಾಂತಃಪುರೆ ರಹಸ್ಯೆ ತಾಮಶೋಕವಿಪಿನೇಕ್ಷಿಪತ್ |
ರಾಕ್ಷಸೀಭಿಃ ಪರಿವೃತಾಂ ಮಾತೃಬುದ್ಧ್ಯಾನುಪಾಲಯತ್ ||೬೦||

ಕೃಶಾತಿದೀನಾ ಪರಿಕರ್ಮವರ್ಜಿತಾ ದುಃಖೇನ ಶುಷ್ಯದ್ವದನಾತಿವಿಹ್ವಲಾ |
ಹಾ ರಾಮ ರಾಮೇತಿ ವಿಲಪ್ಯಮಾನಾ ಸೀತಾ ಸ್ಥಿತಾ ರಾಕ್ಷಸ
ವೃಂದಮಧ್ಯೆ ||೬೧||

ಸಪ್ತಮಸ್ಸರ್ಗಃ ಸಮಾಪ್ತಃ



ಭಾಗವನ್ನು ಹರಿದು ಅದರಲ್ಲಿ ಕಟ್ಟಿ ಇವರು ರಾಮನಿಗೆ ಹೇಳಲೆಂದು ಆ ಬೆಟ್ಟದಲ್ಲಿ ಬಿಸಾಡಿದಳು ||||೫೯||

ಬಳಿಕ ಸಮುದ್ರವನ್ನುದಾಟಿ ಆ ರಾವಣನು ಲಂಕೆಯನ್ನು ಸೇರಿ ರಹಸ್ಯವಾದ ತನ್ನ ಅಂತಃಪುರದಲ್ಲಿ ಅಶೋಕವನದಲ್ಲಿ ಆ ಸೀತೆಯನ್ನು ಇರಿಸಿದನು. ರಾಕ್ಷಸಿಯರಿಂದ ಸುತ್ತುವರೆಯಲ್ಪಟ್ಟ ಆ ಸೀತೆಯನ್ನು ಮಾತೃವೆಂಬ ಭಾವನೆಯಿಂದ ರಕ್ಷಿಸಿದನು ||೬೦||

ಕೃಶಳಾಗಿಯೂ, ದೀನಳಾಗಿಯೂ, ಸ್ನಾನಾದಿ ಸಂಸ್ಕಾರವಿಲ್ಲದವಳಾಗಿಯೂ ದುಃಖದಿಂದ ಒಣಗಿದ ಮುಖವುಳ್ಳವಳಾಗಿಯೂ, ಅತ್ಯಂತ ಪರವಶಳಾಗಿಯೂ ಹಾ ರಾಮ ರಾಮ ಎಂದು ರೋದನವನ್ನು ಮಾಡುತ್ತ ಸೀತೆಯು ರಾಕ್ಷಸಿಯರ ಸಮೂಹದ ಮಧ್ಯದಲ್ಲಿದ್ದಳು ||೬೧||

ಎಂಬಲ್ಲಿಗೆ ಏಳನೆಯ ಸರ್ಗ ಮುಗಿದುದು.



# ಅಷ್ಟಮಸ್ಸರ್ಗಃ.

ಶ್ರೀ ಮಹಾದೇವಃ ||

ರಾಮೋ ಮಾಯಾವಿನಂ ಹತ್ವಾ ರಾಕ್ಷಸಂ ಕಾಮರೂಪಿಣಂ |
ಪ್ರತಸ್ಥೇ ಸ್ವಾಶ್ರಮಂ ಗಂತುಂ ತತೋ ದೂರಾದ್ದದರ್ಶ ತಂ |
ಆಯಾಂತಂ ಲಕ್ಷ್ಮಣಂ ದೀನಂ ಮುಖೇನ ಪರಿಶುಷ್ಯತಾ ||೧||

ರಾಘವಶ್ಚಿಂತಯಾಮಾಸ ಸ್ವಾತ್ಮನ್ಯೇವ ಮಹಾಮತಿಃ |
ಲಕ್ಷ್ಮಣಸ್ತನ್ನಜಾನಾತಿ ಮಾಯಾಸೀತಾಂ ಮಯಾ ಕೃತಾಂ |
ಜ್ಞಾತ್ವಾಪ್ಯೇನಂ ವಂಚಯಿತ್ವಾ ಶೋಚಾಮಿ ಪ್ರಾಕೃತೋ ಯಥಾ ||೨||

ಯದ್ಯಹಂ ವಿರತೋ ಭೂತ್ವಾ ತೂಷ್ಣೀಂ ಸ್ಥಾಸ್ಯಾಮಿ ಮಂದಿರೆ |
ತದಾ ರಾಕ್ಷಸಕೋಟೀನಾಂ ವಧೋಪಾಯಃ ಕಥಂ ಭವೇತ್ ||೩||

ಯದಿ ಶೋಚಾಮಿ ತಾಂ ದುಃಖಸಂತಪ್ತಃ ಕಾಮುಕೋ ಯಥಾ |
ತದಾ ಕ್ರಮೇಣಾನು ಚಿನ್ವನ್ಸೀತಾಂ ಯಾಸ್ಯೇ ಸುರಾಲಯಂ ||೪||

---

ಶ್ರೀ ಪರಮೇಶ್ವರನು ಪಾರ್ವತಿಗೆ ಹೇಳುವನು ||

ಶ್ರೀರಾಮಚಂದ್ರನು ಮಾಯಾವಿಯಾದ್ದರಿಂದ ಕಾಮರೂಪಿಯಾದ ರಾಕ್ಷಸನನ್ನು ಕೊಂದು ತನ್ನ ಆಶ್ರಮವನ್ನು ಸೇರಲು ಹೊರಟನು. ಬಳಿಕ ಒಣಗಿದ ಮೊಗದಿಂದ ದೀನನಾಗಿ ಬರುವ ಆ ಲಕ್ಷ್ಮಣನನ್ನು ದೂರದಲ್ಲಿ ಕಂಡನು ||೧||

ಮಹಾಬುದ್ಧಿಯುಳ್ಳ ರಾಮನು ತನ್ನಲ್ಲೇ ಆಲೋಚಿಸಿದನು. ನನ್ನಿಂದ ಮಾಡಲ್ಪಟ್ಟ ಮಾಯಾಸೀತೆಯನ್ನು ಲಕ್ಷ್ಮಣನು ಅರಿಯನು. ನಾನು ತಿಳಿದೂ ಇವನನ್ನು ವಂಚಿಸಿ ಪ್ರಾಕೃತಜನದಂತೆ ಅಳುವೆನು ||೨||

ವಿರಕ್ತನಾಗಿ ಸುಮ್ಮನೆ ನಾನು ಮನೆಯಲ್ಲಿರುವೆನಾದರೆ ಆಗ ಅನೇಕಕೋಟಿ ರಾಕ್ಷಸರ ಸಂಹಾರೋಪಾಯವೆಂತಾದೀತು ||೩||

ಕಾಮಿಯಂತೆ ನಾನೂ ದುಃಖದಿಂದ ತಪಿಸಲ್ಪಟ್ಟವನಾಗಿ ದುಃಖಪಟ್ಟರೆ

ರಾವಣಂ ಸಕುಲಂ ಹತ್ವಾ ಸೀತಾಮಗ್ನೌ ಸ್ಥಿತಾಂ ಪುನಃ ।
ಮಯೈವ ಸ್ಥಾಪಿತಾಂ ನೀತ್ವಾ ಯಾತಾಯೋಧ್ಯಾಮತಂದ್ರಿತಃ ॥೫॥

ಅಹಂ ಮನುಷ್ಯಭಾವೇನ ಜಾತೋಽಸ್ಮಿ ಬ್ರಹ್ಮಣಾರ್ಥಿತಃ ।
ಮನುಷ್ಯಭಾವಮಾಪನ್ನಃ ಕಿಂಚಿತ್ಕಾಲಂ ವಸಾಮಿ ಕೌ ॥೬॥

ತತೋ ಮಾಯಾಮನುಷ್ಯಸ್ಯ ಚರಿತಂ ಮೇನುಶೃಣ್ವತಾಂ ।
ಮುಕ್ತಿಸ್ಸ್ಯಾದಪ್ರಯಾಸೇನ ಭಕ್ತಿಮಾರ್ಗಾನುವರ್ತಿನಾಂ ॥೭॥

ನಿಶ್ಚಿತ್ಯೈವಂ ತದ್ರುಷ್ಟ್ವಾ ಲಕ್ಷ್ಮಣಂ ವಾಕ್ಯಮಬ್ರವೀತ್ ।
ಕಿಮರ್ಥಮಾಗತೋಽಸಿ ತ್ವಂ ಸೀತಾಂ ತ್ಯಕ್ತ್ವಾ ಮಮ ಪ್ರಿಯಾಂ ॥೮॥

ಸೀತಾವಾಭಕ್ಷಿ ತಾವಾಸಾ ರಾಕ್ಷಸೈರ್ಜನಕಾತ್ಮಜಾ ।
ಇತ್ಯಾಕರ್ಣ್ಯವಚಸ್ತಸ್ಯ ರಾಮಸ್ಯ ಪರಮಾತ್ಮನಃ ॥೯॥

---

ಆಗ ಕ್ರಮದಿಂದ ಸೀತೆಯನ್ನು ಹುಡುಕುತ್ತಾ ಅಸುರರ ಮನೆಯನ್ನು ಸೇರುವೆನು ॥೪॥

ಕುಲಸಹಿತನಾದ ರಾವಣನನ್ನು ಕೊಂದು ಅಗ್ನಿಯಲ್ಲಿ ನನ್ನಿಂದಲೇ ಇರಿಸಲ್ಪಟ್ಟಿರುವ ಸೀತೆಯನ್ನು ಪುನಃ ತೆಗೆದುಕೊಂಡು ಆಲಸ್ಯವಿಲ್ಲದವನಾಗಿ ಅಯೋಧ್ಯೆಯನ್ನು ಸೇರುವೆನು ॥೫॥

ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟ ನಾನು ಮನುಷ್ಯಭಾವದಿಂದ ಹುಟ್ಟಿರುವೆನು, ಆದಕಾರಣ ಮನುಷ್ಯಭಾವವನ್ನು ಪಡೆದವನಾಗಿಯೇ ಸ್ವಲ್ಪಕಾಲ ಭೂಮಿಯಲ್ಲಿರುವೆನು ॥೬॥

ಯಾರು ಮಾಯಾಮನುಷ್ಯನಾದ ನನ್ನ ಚರಿತ್ರೆಯನ್ನು ಕೇಳುತ್ತಾ ಭಕ್ತಿಮಾರ್ಗವನ್ನನುಸರಿಸುವವರಿಗೆ ಪ್ರಯಾಸವಿಲ್ಲದೆ ಮುಕ್ತಿಯಾಗುವುದು ॥೭॥

ಎಂದು ನಿಶ್ಚಯಿಸಿ ಆಗ ರಾಮನು ಲಕ್ಷ್ಮಣನನ್ನು ನೋಡಿ ಮಾತನಾಡಿದನು. ಎಲೈ ಲಕ್ಷ್ಮಣನೇ ನೀನು ನನಗೆ ಪ್ರಿಯಳಾದ ಸೀತೆಯನ್ನು ಬಿಟ್ಟು ಏನುಕಾರಣ ಬಂದವನಾದೆ ॥೮॥

ಆ ಜನಕನಂದಿನಿಯು ರಾಕ್ಷಸರಿಂದ ತೆಗೆದುಕೊಂಡುಹೋಗಲ್ಪಟ್ಟಳೋ, ಅಥವಾ ತಿನ್ನಲ್ಪಟ್ಟಳೋ ಎಂದು ಪರಮಾತ್ಮನಾದ ಶ್ರೀರಾಮನು ಆಡಿದ ವಾಕ್ಯವನ್ನು ಕೇಳಿ ॥೯॥

ನನಾಮ ಶಿರಸಾ ಭಕ್ತ್ಯಾ ಬಾಷ್ಪವ್ಯಾಕುಲಿತೇಕ್ಷಣಃ |
ಲಕ್ಷ್ಮಣಃ ಪ್ರಾಂಜಲಿಃಪ್ರಾಹ ಸೀತಾಯಾ ದುರ್ವಚೋರುದನ್ ||೧೦||

' ಹಾ ಲಕ್ಷ್ಮಣೇತಿ ವಚನಂ ರಾಕ್ಷಸೋಕ್ತಂ ಶ್ರುತಂ ತಯಾ |
ತದ್ವಾಕ್ಯಸದೃಶಂ ಭೀತಾ ಮಾಂ ಗಚ್ಛೇತಿ ತ್ವರಾ ಬ್ರವೀತ್' ||೧೧||

ರುದತೀ ಸಾ ಮಯಾ ಚೋಕ್ತಾ ದೇವಿ ರಾಕ್ಷಸಭಾಷಿತಂ |
ನೇದಂ ರಾಮಸ್ಯ ವಚನಂ ಸ್ವಸ್ಥಾ ಭವ ಶುಭಾನನೆ ||೧೨||

ಇತ್ಯೇವಂ ಸಾಂತ್ವಿತಾ ಸಾಧ್ವೀ ಮಯಾ ಪ್ರೋವಾಚ ಮಾಂ ಪುನಃ |
ಯದುಕ್ತಂ ದುರ್ವಚೊ ರಾಮ ನವಾಚ್ಯಂ ಪುರತ ಸ್ತವ ||೧೩||

ಕರ್ಣೌ ಪಿಧಾಯ ನಿರ್ಗತ್ಯ ಯಾತೋಹಂ ತ್ವಾಂ ಸಮೀಕ್ಷಿತುಂ |
ರಾಮಸ್ತು ಲಕ್ಷ್ಮಣಂ ಪ್ರಾಹ ತಥಾ ಪ್ಯನುಚಿತಂ ಕೃತಂ |
ತ್ವಯಾ ಸ್ತ್ರೀಭಾಷಿತಂ ಸತ್ಯಂ ಕೃತ್ವಾ ತ್ಯಕ್ತಾ ಶುಭಾನನಾ ||೧೪||

---

ಕಣ್ಣೀರಿನಿಂದ ಕೂಡಿದ ಲಕ್ಷ್ಮಣನು ಭಕ್ತಿಯಿಂದ ನಮಿಸಿ ಬದ್ಧಾಂಜಲಿಯಾಗಿ ಅಳುತ್ತಾ, ಸೀತೆಯು ಆಡಿದ ಕೆಟ್ಟ ಮಾತನ್ನು ಈರೀತಿಯಾಗಿ ಹೇಳಿದನು ||

ಹಾ ಲಕ್ಷ್ಮಣ ಎಂದು ನಿನ್ನ ಮಾತಿಗೆ ಸರಿಯಾದ ಆ ರಾಕ್ಷಸನಮಾತು ಅವಳಿಗೆ ಕೇಳಿಸಿತು ಅದರಿಂದ ಅವಳು ಭಯಪಟ್ಟು ಜಾಗ್ರತೆಯಾಗಿ ನನ್ನನ್ನು ಹೋಗೆಂದು ಹೇಳಿದಳು ||೧೧||

ಅಳುತ್ತಿರುವ ಆ ಸೀತೆಗೆ ಎಲೌ ಶುಭಮುಖಿಯೇ ಇದು ರಾಮನ ಮಾತಲ್ಲ. ರಾಕ್ಷಸನದೇ ಈ ಮಾತು, ಆದುದರಿಂದ ನೀನು ಸಮಾಧಾನದಿಂದಿರು ಎಂದು ಹೇಳಿದೆನು ||೧೨||

ಈಪ್ರಕಾರ ನನ್ನಿಂದ ಸಮಾಧಾನಪಡಿಸಲ್ಪಟ್ಟವಳಾದರೂ ಆ ಸೀತೆಯು ಅಸಾಧುವಾಗಿ ಪುನಃ ನನಗೆ ಹೇಳಿದಳು. ಎಲೈ ರಾಮನೇ ಯಾವ ಕೆಟ್ಟಮಾತು ಅವಳಿಂದ ಹೇಳಲ್ಪಟ್ಟಿತೋ ಅದು ನಿನ್ನೆದುರಿಗೆ ಹೇಳತಕ್ಕದ್ದಲ್ಲ ||೧೩||

ನಾನು ಕಿವಿಗಳನ್ನು ಮುಚ್ಚಿಕೊಂಡು ಹೊರಟು ನಿನ್ನನ್ನು ನೋಡಲು ಬಂದೆನು ಎಂದು ಹೇಳಿದ ಲಕ್ಷ್ಮಣನಿಗೆ ರಾಮನು ಹೇಳಿದನು. ಎಲೈ ಲಕ್ಷ್ಮಣನೇ ಹಾಗೆ ಅವಳು ಹೇಳಿದಾಗ್ಯೂ ಹೆಂಗಸಿನಮಾತನ್ನು ಸತ್ಯವೆಂದೆಣಿಸಿ ಶುಭಮುಖಿಯಾದ ಅವಳು ಬಿಡಲ್ಪಟ್ಟವಳಲ್ಲವೆ ? ಅನುಚಿತವಾದ ಈ ಕಾರ್ಯವು ನಿನ್ನಿಂದ ಮಾಡಲ್ಪಟ್ಟಿತು ||

ನೀತಾ ವಾ ಭಕ್ಷಿತಾವಾಪಿ ರಾಕ್ಷಸೈ ರ್ನಾತ್ರ ಸಂಶಯಃ |
ಇತಿ ಚಿಂತಾಪರೋ ರಾಮ ಸ್ಸ್ವಾಶ್ರಮಂ ತ್ವರಿತೊ ಯಯೌ ||೧೫||

ತತ್ರಾದೃಷ್ಟ್ವಾ ಜನಕಜಾಂ ವಿಲಲಾಪಾತಿದುಃಖಿತಃ |
ಹಾ ಪ್ರಿಯೆ ಕ್ವಗತಾಸಿ ತ್ವಂ ನಾಸಿ ಪೂರ್ವವದಾಶ್ರಮೆ |
ಅಥವಾ ಮದ್ವಿಮೋಹಾರ್ಥಂ ಲೀಲಯಾ ಕ್ವ ವಿಲೀಯಸೆ ||೧೬||

ಇತ್ಯಾ ಚಿನ್ವ ನ್ವನಂ ಸರ್ವಂ ನಾಪಶ್ಯ ಜ್ಜಾನಕೀಂ ತದಾ |
ವನದೇವ್ಯಃ ಕುತ ಸ್ಸೀತಾ ಬ್ರುವಂತು ಮಮ ವಲ್ಲಭಾಂ |
ಮೃಗಾಶ್ಚ ಪಕ್ಷಿಣೊ ವೃಕ್ಷಾ ದರ್ಶಯಂತು ಮಮ ಪ್ರಿಯಾಂ ||೧೭||

ಇತ್ಯೇವಂ ವಿಲಪನ್ನೇವ ರಾಮ ಸ್ಸೀತಾಂ ನಕುತ್ರಚಿತ್ |
ಸರ್ವಜ್ಞ ಸ್ಸರ್ವಥಾ ಕ್ವಾಪಿ ನಾಪಶ್ಯ ದ್ರಘುನಂದನಃ ||೧೮||

ಆನಂದೊ ಪ್ಯನ್ವಶೋಚತ್ತಾ ಮಹಲೋಪ್ಯ ನುಧಾವತಿ |
ಮಮಜಾಯೇತಿ ಸೀತೇತಿ ವಿಲಲಾಪಾತಿ ದುಃಖಿತಃ | ||೧೯||

---

ರಾಕ್ಷಸರಿಂದ ಅವಳು ತೆಗೆದುಕೊಂಡು ಹೋಗಲ್ಪಟ್ಟಳೋ, ಭಕ್ಷಿಸಲ್ಪಟ್ಟಳೋ ಸಂಶಯವಿಲ್ಲ. ಎಂದು ಚಿಂತಾಸಕ್ತನಾದ ರಾಮನು ಜಾಗ್ರತೆಯಾಗಿ ತನ್ನ ಆಶ್ರಮವನ್ನು ಸೇರಿದನು ||೧೫||

ಅಲ್ಲಿ ಸೀತೆಯನ್ನು ಕಾಣದೆ ಅತ್ಯಂತ ದುಃಖಿತನಾಗಿ ಹಾ ಪ್ರಿಯಳೇ ನೀನು ಎಲ್ಲಿಗೆ ಹೋಗಿರುವೆ ? ಪೂರ್ವದಂತೆ ನೀನು ಆಶ್ರಮದಲ್ಲಿಲ್ಲವಲ್ಲ ; ಅಥವಾ ನನ್ನನ್ನು ಮೋಹಪಡಿಸಲೋಸುಗ ಲೀಲೆಯಿಂದ ಎಲ್ಲಿ ಅವಿತುಕೊಂಡಿರುವೆ ||೧೬||

ಎಂದು ವನವೆಲ್ಲವನ್ನೂ ಹುಡುಕಿದರೂ ಜಾನಕಿಯನ್ನು ಕಾಣಲಿಲ್ಲ. ಆಗ ವನದೇವತೆಗಳೇ ಸೀತೆಯು ಎಲ್ಲಿರುವಳೋ ನನ್ನ ಮನೋಹರಳಾದ ಆ ಸೀತೆಯನ್ನು ತೋರಿಸಿರಿ. ಎಲೈ ಮೃಗಪಕ್ಷಿಗಳೇ, ವೃಕ್ಷಗಳೇ ನೀವಾದರೂ ನನ್ನ ಪ್ರಿಯಳನ್ನು ತೋರಿಸಿರಿ ||೧೭||

ಎಂದು ಈಪ್ರಕಾರವಾಗಿ ಅಳುತ್ತಲೇ ರಘುನಂದನನಾದ ರಾಮನು ಸರ್ವಜ್ಞನಾದಾಗ್ಯೂ ಮಾನುಷವೇಷಕ್ಕೆ ಸರಿಯಾದ ಲೀಲೆಯಿಂದ ಸರ್ವಪ್ರಕಾರದಿಂದಲೂ ಆ ಸೀತೆಯನ್ನು ಎಲ್ಲೂ ಕಾಣಲಿಲ್ಲ ||೧೮||

ಈ ರೀತಿಯಿಂದಲೇ ಆನಂದರೂಪನಾದಾಗ್ಯೂ ಅನುಸರಿಸಿ ಓಡಿದನೆನ್ನುವಲ್ಲಿ

ಏವಂ ಮಾಯಯಾ ಮನುಜರನ್ನ ಸಕ್ತೋಽಪಿ ರಘೂತ್ತಮಃ |
ಅಸಕ್ತ ಇವ ಮೂಢಾನಾಂ ಭಾತಿ ತತ್ವವಿದಾಂ ನಹಿ | ||೨೦||

ಏವಂ ವಿಚಿನ್ವಂ ತ್ಸಕಲಂ ವನಂ ರಾಮ ಸ್ಸಲಕ್ಷ್ಮಣಃ |
ಭಗ್ನಂ ರಥಂ ಛತ್ರಚಾಪಂ ಕೂಬರಂ ಪತಿತಂ ಭುವಿ |
ದೃಷ್ಟ್ವಾ ಲಕ್ಷ್ಮಣ ಮಾಹೇದಂ ಪಶ್ಯ ಲಕ್ಷ್ಮಣ ಕೇನ ಚಿತ್ ||೨೧||

ನೀಯಮಾನಾಂ ಜನಕಜಾಂ ತಂ ಜಿತ್ವಾ ನ್ಯೋಽಜಹಾರತಾಂ |
ತತಃ ಕಂಚಿ ದ್ದ್ವೋ ಭಾಗಂ ಗತ್ವಾ ಪರ್ವತಸನ್ನಿಭಂ |
ರುಧಿರಾಕ್ತವಪು ರ್ದೃಷ್ಟ್ವಾ ರಾಮೋ ವಾಕ್ಯಮಥಾಬ್ರವೀತ್ ||೨೨||

ಏಷವೈ ಭಕ್ಷಯಿತ್ವಾ ತಾಂ ಜಾನಕೀಂ ಶುಭದರ್ಶನಾಂ |
ಶೇತೆ ವಿವಿಕ್ತೇತಿತೃಪ್ತಃ ಪಶ್ಯ ಹನ್ಮಿ ನಿಶಾಚರಂ |
ಚಾಪ ಮಾನಯ ಶೀಘ್ರಂ ಮೆ ಬಾಣಂ ಚ ರಘುನಂದನ ||೨೩||

---

(ಧ್ಯಾನದೃಷ್ಟಿಯಿಂದ ಅವಳನ್ನು ಕಂಡು ಓಡಿದನೆಂದು ತಿಳಿಯುವುದು). ನಿರ್ಮಲನಾದರೂ, ಅಹಂಕಾರವಿಲ್ಲದವನಾದರೂ, ಅಖಂಡವಾದ ರೂಪವುಳ್ಳವನಾದರೂ ನನ್ನ ಹೆಂಡತಿಯೆಂತಲೂ, ಸೀತೆಯೆಂತಲೂ ಅತ್ಯಂತ ದುಃಖಿತನಾಗಿ ಅತ್ತನು ||೧೯||

ಈ ಪ್ರಕಾರ ಮಾಯೆಯನ್ನನುಸರಿಸಿ ನಡೆಯುತಿದ್ದಾಗ್ಯೂ ತನಗೆ ಭಿನ್ನವಾದ ಪದಾರ್ಥವಿಲ್ಲವೆಂಬ ಜ್ಞಾನದಿಂದ ಅಸಕ್ತನಾದ ರಾಮನು ಮೂಢರಿಗೆ ಅಭಿಮಾನಿಯಂತೆ ಕಾಣುತ್ತಿದ್ದನು. ಜ್ಞಾನಿಗಳಿಗೆ ಕಾಣಬರಲಿಲ್ಲ ||೨೦||

ಹೀಗೆ ವನವೆಲ್ಲವನ್ನೂ ಹುಡುಕುತ್ತಾ ಲಕ್ಷ್ಮಣಸಹಿತನಾದ ರಾಮನು ಭೂಮಿಯಲ್ಲಿ ಮುರಿದುಬಿದ್ದಿರುವ ತೇರನ್ನೂ, ಛತ್ರ ಧನುಗಳನ್ನೂ, ಮೂಕಿಯ ಮರವನ್ನೂ ನೋಡಿ ಲಕ್ಷ್ಮಣನಿಗೆ ಹೇಳಿದನು. ಎಲೈ ಲಕ್ಷ್ಮಣನೇ ನೋಡು ಯಾವನೋ ಒಬ್ಬನಿಂದ ||೨೧||

ತೆಗೆದುಕೊಂಡು ಹೋಗುತ್ತಿದ್ದ ಸೀತೆಯನ್ನು ಮತ್ತೊಬ್ಬನು ಜಯಿಸಿಕೊಂಡುಹೋಗಿರುವನು ಎಂದು ಹೇಳಿ ಆ ಸ್ಥಳದಿಂದ ಮುಂದಕ್ಕೆ ಕೊಂಚದೂರ ಹೋಗಿ ರಕ್ತದಿಂದ ನೆನೆದ ಮೈಯುಳ್ಳ ಬೆಟ್ಟದಂತಿರುವ ಒಂದು ಪ್ರಾಣಿಯನ್ನು ನೋಡಿ ಬಳಿಕ ರಾಮನು ಮಾತನಾಡಿದನು ||೨೨||

ಈ ರಾಕ್ಷಸನೇ ಶುಭವಾದ ನೋಟವುಳ್ಳ ಸೀತೆಯನ್ನು ತಿಂದು ತೃಪ್ತನಾಗಿ

ತಚ್ಛ್ರುತ್ವಾ ರಾಮವಚನಂ ಜಟಾಯುಃ ಪ್ರಾಹ ಭೀತವತ್ |
ಮಾಂ ನಮಾರಯ ಭದ್ರಂತೇ ಮ್ರಿಯಮಾಣಂ ಸ್ವಕರ್ಮಣಾ ||೨೪||

ಅಹಂ ಜಟಾಯುಸ್ತೇ ಭಾರ್ಯಾಹಾರಿಣಂ ಸಮನುದ್ರುತಃ |
ರಾವಣಂ ತತ್ರ ಯುದ್ಧಂಮೇ ಬಭೂವಾರಿವಿಮರ್ದನ ||೨೫||

ತಸ್ಯ ವಾಹಾನ್ರಥಂ ಚಾಪಿ ಛಿತ್ವಾ ಹಂ ತೇನ ಘಾತಿತಃ |
ಪತಿತೋಸ್ಮಿ ಜಗನ್ನಾಥ ಪ್ರಾಣಾಂಸ್ತ್ಯಕ್ಷ್ಯಾಮಿ ಪಶ್ಯ ಮಾಂ ||೨೬||

ತಚ್ಛ್ರುತ್ವಾ ರಾಘವೋ ದೀನಂ ಕಂಠಪ್ರಾಣಂ ದದರ್ಶ ಹ |
ಹಸ್ತಾಭ್ಯಾಂ ಸಂಸ್ಪೃಶನ್ಪ್ರಾಹ ದುಃಖಾಶ್ರುವೃತಲೋಚನಃ ||೨೭||

ಜಟಾಯೋ ಬ್ರೂಹಿ ಮೇ ಭಾರ್ಯಾ ಕೇನ ನೀತಾ ಶುಭಾನನಾ |
ಮತ್ಕಾರ್ಯಾರ್ಥಂ ಹತೋಸಿ ತ್ವಂ ಕೇನ ಮೇ ಪ್ರಿಯಬಾಂಧವಃ ||೨೮||

---

ಈ ರಹಸ್ಯವಾದ ಸ್ಥಳದಲ್ಲಿ ಮಲಗಿರುವನು ನೋಡು. ಇವನನ್ನು ನಾನು ಕೊಲ್ಲುವೆನು. ಎಲೈ ಲಕ್ಷ್ಮಣನೇ ಜಾಗ್ರತೆಯಾಗಿ ನನ್ನ ಧನುವನ್ನೂ, ಬಾಣವನ್ನೂ ತಂದು ಕೊಡು ||೨೩||

ಎಂದು ರಾಮನು ಹೇಳುತ್ತಿರಲು, ಆ ಶ್ರೀರಾಮನ ಮಾತನ್ನು ಕೇಳಿ ಜಟಾಯುವು ಭಯಪಟ್ಟವನಂತೆ ಹೇಳಿದನು. ಶ್ರೀರಾಮನೇ ನಿನಗೆ ಶುಭವಾಗಲಿ, ನನ್ನ ಕರ್ಮದಿಂದಲೇ ಸಾಯುತ್ತಿರುವ ನನ್ನನ್ನು ನೀನು ಹೊಡೆಯಬೇಡ ||೨೪||

ಎಲೈ ಶತೃಸಂಹಾರಕನೇ ನಾನು ಜಟಾಯುವು. ನಿನ್ನ ಪತ್ನಿಯನ್ನು ಕೊಂಡು ಹೊಗುತ್ತಿದ್ದ ರಾವಣನನ್ನು ಅಟ್ಟಿಕೊಂಡು ಹೋದೆನು, ಅಲ್ಲಿ ಅವನೊಡನೆ ಯುದ್ಧವಾಯಿತು ||೨೫||

ಎಲೈ ಜಗನ್ನಾಥನೇ, ಅವನ ರಥವನ್ನೂ ಕುದುರೆಗಳನ್ನೂ ಕತ್ತರಿಸಿ ಅವನಿಂದ ಹೊಡೆಯಲ್ಪಟ್ಟವನಾಗಿ ಬಿದ್ದಿದೇನೆ, ಈಗ ನಾನು ಪ್ರಾಣವನ್ನು ಬಿಡುವೆನು, ನನ್ನನ್ನು ನೋಡುವನಾಗು ||೨೬||

ಆ ಮಾತನ್ನು ಕೇಳಿ ರಾಮನು ಕಂಠಗತಪ್ರಾಣನಾಗಿ ದೀನನಾಗಿ ಬಿದ್ದಿರುವ ಆ ಪಕ್ಷಿರಾಜನನ್ನು ನೋಡಿದನು. ಮತ್ತೆ ರಾಮನು ಕೈಗಳಿಂದ ಅವನನ್ನು ಮುಟ್ಟುತ್ತಾ ದುಃಖಬಾಷ್ಪಗಳಿಂದ ಆವರಿಸಲ್ಪಟ್ಟ ಕಣ್ಣುಳ್ಳವನಾದನು ||೨೭||

ಎಲೈ ಜಟಾಯುವೇ! ಶುಭವಾದ ಮುಖವುಳ್ಳ ನನ್ನ ಪತ್ನಿಯು ಯಾವನಿಂದ

ಜಟಾಯುಃ ಸನ್ನಯಾ ವಾಚಾ ವಕ್ತ್ರಾದ್ರಕ್ತಂ ಸಮುದ್ವಮನ್ |
ಉವಾಚ ರಾವಣೋ ರಾಮ ರಾಕ್ಷಸೋ ಭೀಮವಿಕ್ರಮಃ ||೨೯||

ಆದಾಯ ಮೈಥಿಲೀಂ ಸೀತಾಂ ದಕ್ಷಿಣಾಭಿಮುಖೋ ಯಯೌ |
ಇತೋ ವಕ್ತುಂ ನ ಶಕ್ತೋಽಸ್ಮಿ ಪ್ರಾಣಾಂಸ್ತ್ಯಕ್ಷ್ಯಾಮಿ ತೇಽಗ್ರತಃ ||೩೦||

ದಿಷ್ಟ್ಯಾ ದೃಷ್ಟೋಽಸಿ ರಾಮ ತ್ವಂ ಮ್ರಿಯಮಾಣೇನ ಮೇಽನಘ |
ಪರಮಾತ್ಮಾಸಿ ವಿಷ್ಣುಸ್ತ್ವಂ ಮಾಯಾಮನುಜರೂಪಧೃಕ್ ||೩೧||

ಅಂತಕಾಲೇಽಪಿ ದೃಷ್ಟ್ವಾ ತ್ವಾಂ ಮುಕ್ತೋಽಹಂ ರಘುಸತ್ತಮ |
ಹಸ್ತಾಭ್ಯಾಂ ಸ್ಪೃಶ ಮಾಂ ರಾಮ ಪುನರ್ಯಾಸ್ಯಾಮಿ ತೇ ಪದಂ ||೩೨||

ತಥೇತಿ ರಾಮಃ ಪಸ್ಪರ್ಶ ತದಂಗಂ ಪಾಣಿನಾ ಸ್ಮಯನ್ |
ತತಃ ಪ್ರಾಣಾನ್ಪರಿತ್ಯಜ್ಯ ಜಟಾಯುಃ ಪತಿತೋ ಭುವಿ ||೩೩||

---

ತೆಗೆದುಕೊಂಡು ಹೋಗಲ್ಪಟ್ಟಳು? ನನ್ನ ಕೆಲಸಕ್ಕೋಸ್ಕರ ನೀನು ಹೊಡೆಯಲ್ಪಟ್ಟವನಾದೆಯಲ್ಲವೆ? ಅದರಿಂದ ನೀನು ನನಗೆ ಪ್ರಿಯನಾದ ಬಂಧುವು ||೨೮||

ಎಂದು ರಾಮನು ಕೇಳಲು, ಜಟಾಯುವು ರಕ್ತವನ್ನು ಕಾರುತ್ತ ಕೃಶವಾದ ಮಾತಿನಿಂದ ನುಡಿದನು. ಎಲೈ ಶ್ರೀರಾಮನೇ, ಭಯಂಕರ ಪರಾಕ್ರಮವುಳ್ಳ ರಾವಣನೆಂಬ ರಾಕ್ಷಸನು ||೨೯||

ಸೀತೆಯನ್ನು ತೆಗೆದುಕೊಂಡು ದಕ್ಷಿಣಾಭಿಮುಖವಾಗಿ ಹೋದನು. ಇನ್ನು ಮಾತನಾಡಲು ನನಗೆ ಶಕ್ತಿಯು ಸಾಲದು. ನಿನ್ನೆದುರಿಗೆ ನಾನು ಪ್ರಾಣವನ್ನು ಬಿಡುವೆನು ||೩೦||

ಎಲೈ ನಿತ್ಯಶುದ್ಧನಾದ ರಾಮನೇ! ಸಾಯುತ್ತಿರುವ ನನ್ನಿಂದ ನೀನು ದೈವಯೋಗದಿಂದ ನೋಡಲ್ಪಟ್ಟಿರುವೆ. ಪರಮಾತ್ಮನಾದ ನೀನು ವಿಷ್ಣುವಾಗಿಯೂ, ಮಾಯೆಯಿಂದ ಮನುಷ್ಯರೂಪನಾಗಿಯೂ, ಇರುವೆ ||೩೧||

ಎಲೈ ರಘುಶ್ರೇಷ್ಠನೇ! ಅಂತ್ಯಕಾಲವಾದ ವೃದ್ಧಾಪ್ಯದಲ್ಲಿ ನಿನ್ನನ್ನು ನೋಡಿಯೇ ನಾನು ದೇಹಾದ್ಯಭಿಮಾನಗಳಿಂದ ಬಿಡಲ್ಪಟ್ಟವನಾಗಿ ಜೀವನ್ಮುಕ್ತನಾಗಿದ್ದೇನೆ. ಆದರೂ ಈಗಲೂ ಪ್ರಾರ್ಥಿಸುವೆನು. ಸರ್ವದುಃಖನಾಶಕವಾದ ನಿನ್ನ ಹಸ್ತಗಳಿಂದ ಮುಟ್ಟುವನಾಗು, ನಿನ್ನ ಸ್ಥಾನವಾದ ವೈಕುಂಠವನ್ನು ಸೇರುವೆನು ||೩೨||

ಎಂದು ಆ ಜಟಾಯುವು ಪ್ರಾರ್ಥಿಸಲು, ರಾಮನು ಹಾಗೆಯೇ ಆಗಲೆಂದು

ರಾಮುಸ್ತಮನುಶೋಚಿತ್ವಾ ಬಂಧುವತ್ಸಾಶ್ರುಲೋಚನಃ |
ಲಕ್ಷ್ಮಣೇನ ಸಮಾನಾಯ್ಯ ಕಾಷ್ಠಾನಿ ಪ್ರದದಾಹ ತಂ ||೩೪||

ಸ್ನಾತ್ವಾ ದುಃಖೇನ ರಾಮೋಽಪಿ ಲಕ್ಷ್ಮಣೇನ ಸಮನ್ವಿತಃ |
ಹತ್ವಾ ವನೇ ಮೃಗಂ ತತ್ರ ಮಾಂಸಖಂಡಾನ್ಸಮಂತತಃ ||೩೫||

ಶಾದ್ವಲೇ ಪ್ರಾಕ್ಷಿಪದ್ರಾಮಃ ಪೃಥಕ್ಪೃಥಗನೇಕಧಾ |
ಭಕ್ಷಂತು ಪಕ್ಷಿಣಸ್ಸರ್ವೇ ತೃಪ್ತೋ ಭವತು ಪಕ್ಷಿರಾಟ್ ||೩೬||

ಇತ್ಯುಕ್ತ್ವಾ ರಾಘವಃ ಪ್ರಾಹ ಜಟಾಯೊ ಗಚ್ಛ ಮತ್ಪದಂ |
ಮತ್ಸಾರೂಪ್ಯಂ ಭಜಸ್ವಾದ್ಯ ಸರ್ವಲೋಕಸ್ಯ ಪಶ್ಯತಃ ||೩೭||

ತತೋಽನಂತರಮೇವಾಸೌ ದಿವ್ಯರೂಪಧರಃ ಶುಭಃ |
ವಿಮಾನವರಮಾರುಹ್ಯ ಭಾಸ್ವರಂ ಭಾನುಸನ್ನಿಭಂ ||೩೮||

---

ನಗುತ್ತಾ ಅವನ ಶರೀರವನ್ನು ಮುಟ್ಟಿದನು. ಒಳಿಕ ಜಟಾಯುವು ಪ್ರಾಣಗಳನ್ನು ಬಿಟ್ಟು ನೆಲದಲ್ಲಿ ಬಿದ್ದನು ||೩೩||

ರಾಮುನು ಬಂಧುವಿನಂತೆ ಅವನನ್ನು ಕುರಿತು ಕಣ್ಣೀರಿನಿಂದ ಕೂಡಿ ಅತ್ತು ಲಕ್ಷ್ಮಣನಿಂದ ಕಾಷ್ಠಗಳನ್ನು ತರಿಸಿ ಅವನ ಶರೀರವನ್ನು ದಹಿಸಿದನು ||೩೪||

ಬಳಿಕ ರಾಮುನು ಲಕ್ಷ್ಮಣಸಹಿತನಾಗಿ ದುಃಖದಿಂದ ಸ್ನಾನವನ್ನು ಮಾಡಿ ಆ ಅರಣ್ಯದಲ್ಲಿ ಒಂದು ಮೃಗವನ್ನು ಕೊಂದು ಅದರ ಮಾಂಸಖಂಡಗಳನ್ನು ಎಲ್ಲಾ ಕಡೆಯಲ್ಲಿಯೂ ||೩೫||

ಸೊದೇಹುಲ್ಲುಗಳಿಂದ ಕೂಡಿದ ಭೂಮಿಯಲ್ಲಿ ಬೇರೆಬೇರೆಯಾಗಿಯೂ, ಅನೇಕ ಪ್ರಕಾರವಾಗಿಯೂ ಹಾಕಿದನು, ಇದನ್ನು ಸಮಸ್ತ ಪಕ್ಷಿಗಳೂ ತಿನ್ನಲಿ. ಪಕ್ಷಿರಾಜನಾದ ಜಟಾಯುವು ಇದರಿಂದ ತೃಪ್ತನಾಗಲೆಂದು ರಾಮನು ಹೇಳಿದನು ||೩೬||

ಇಂತು ಹೇಳಿ ರಾಮನು ಎಲೈ ಜಟಾಯುವೇ! ನನ್ನ ಸ್ಥಾನವಾದ ವೈಕುಂಠವನ್ನು ಹೊಂದು, ಈಗ ಸಮಸ್ತಜನಗಳೂ ನೋಡುತ್ತಿರುವಲ್ಲಿ ನನ್ನ ಸಮಾನವಾದ ರೂಪವನ್ನು ಹೊಂದುವವನಾಗು ||೩೭||

ಎಂದು ಶ್ರೀರಾಮನು ಹೇಳಲು ಆ ಮಾತು ಹೊರಟಕೂಡಲೇ ಈ ಜಟಾಯುವು, ದಿವ್ಯವಾದ ರೂಪವನ್ನು ಧರಿಸಿದವನಾಗಿಯೂ, ಶುಭವಾದ ನೋಟವುಳ್ಳವ

ಶಂಖಚಕ್ರಗದಾಪದ್ಮ ಕಿರೀಟವರಭೂಷಣೈಃ ।
ದ್ಯೋತಯನ್ ಸ್ವಪ್ರಕಾಶೇನ ಪೀತಾಂಬರಧರೋಮಲಃ ॥೩೯॥

ಚತುರ್ಭಿಃ ಪಾರ್ಷದೈರ್ವಿಷ್ಣೋಸ್ತಾದೃಶೈಃ ಪರಿಪೂಜಿತಃ ।
ಸ್ತೂಯಮಾನೋ ಮುನಿಗಣೈ ರಾಮಮಾಭಾಷ್ಯ ಸತ್ವರಃ ।
ಕೃತಾಂಜಲಿಪುಟೋ ಭೂತ್ವಾ ತುಷ್ಟಾವ ರಘುನಂದನಂ ॥೪೦॥

ಅಗಣಿತಗುಣಮಪ್ರಮೇಯಮಾದ್ಯಂ ಸಕಲಜಗತ್‌ಸ್ಥಿತಿಸಂಯಮಾದಿಹೇತುಂ ।
ಉಪರಮಪರಮಂ ಪರಾತ್ಮಭೂತಂ ಸತತ ಮಹಂ ಪ್ರಣತೋಽಸ್ಮಿ ರಾಮಚಂದ್ರಂ ॥

ನಿರವಧಿಸುಖಮಿಂದಿರಾಕಟಾಕ್ಷಂ ಕ್ಷಪಿತಸುರೇಂದ್ರಚತುರ್ಮುಖಾದಿದುಃಖಂ ।
ನರವರ ಮನಿಶಂ ನತೋಽಸ್ಮಿ ರಾಮಂ ವರದ ಮಹಂ ವರಚಾಪಬಾಣಹಸ್ತಂ ॥೪೨॥

---

ನಾಗಿಯೂ, ಸೂರ್ಯನಿಗೆ ಸರಿಯಾಗಿ ಪ್ರಕಾಶಿಸುತ್ತಾ ವಿಮಾನವನ್ನು ಹತ್ತಿಕೊಂಡು ॥

ಶಂಖಚಕ್ರಗದಾಪದ್ಮಗಳಿಂದಲೂ, ಕಿರೀಟ ಮೊದಲಾದ ಉತ್ತಮವಾದ ಆಭರಣಗಳಿಂದಲೂ ನಿಜಪ್ರಕಾಶದಿಂದಲೂ ಆ ಪ್ರದೇಶವನ್ನು ಬೆಳಗುತ್ತಾ, ನಿರ್ಮಲನಾಗಿಯೂ ಪೀತಾಂಬರಧರನಾಗಿಯೂ ॥೩೯॥

ತನ್ನಂತಿರುವ ನಾಲ್ಕುಮಂದಿ ವಿಷ್ಣುವಿನ ಸಭಾಜನರಿಂದ ಸನ್ಮಾನಿತನಾಗಿಯೂ ಮುನಿಸಮೂಹಗಳಿಂದ ಸ್ತುತಿಸಲ್ಪಡುವನಾಗಿಯೂ, ವೇಗದಿಂದ ಕೂಡಿದವನಾಗಿಯೂ, ಬಂದು ಅಂಜಲಿಬದ್ಧನಾಗಿ ಶ್ರೀರಾಮನನ್ನು ಸ್ತುತಿಸಿದನು ॥೪೦॥

ಅಸಂಖ್ಯಾತವಾದ ಗುಣವುಳ್ಳವನಾಗಿಯೂ, ಗೋಚರವಾದ ಪದಾರ್ಥದಂತೆ ಜ್ಞಾನಗೋಚರನಲ್ಲದವನಾಗಿಯೂ ಜಗವೆಲ್ಲಕ್ಕೂ ಆದಿಯಲ್ಲಿರುವನಾಗಿ ಸಕಲವಾದ ಜಗತ್ತಿನ ಸ್ಥಿತಿ ನಾಶಾದಿಗಳಿಗೆ ಕಾರಣನಾಗಿಯೂ, ಶಾಂತಿಯೇ ಮುಖ್ಯವಾಗುಳ್ಳವನಾಗಿಯೂ ಸಕಲ ಪ್ರಾಣಿಗಳಿಗೂ ಪರಮಾತ್ಮನಾದ ರಾಮಚಂದ್ರನನ್ನು ಕುರಿತು ನಾನು ಸರ್ವಕಾಲದಲ್ಲಿಯೂ ನಮಿಸುತ್ತಿರುವೆನು ॥೪೧॥

ಕೊನೆಯಿಲ್ಲದ ಸುಖಸ್ವರೂಪನಾಗಿಯೂ, ಲಕ್ಷ್ಮಿಯಲ್ಲಿ ಕಟಾಕ್ಷವುಳ್ಳವನಾಗಿಯೂ, ಅಥವಾ ಲಕ್ಷ್ಮಿಯ ಕಟಾಕ್ಷಕ್ಕೆ ಮುಖ್ಯಾಶ್ರಯನಾಗಿಯೂ, ಹೋಗಲಾಡಿಸಲ್ಪಟ್ಟ ದೇವಶ್ರೇಷ್ಠರಾದ ಬ್ರಹ್ಮಾದಿಗಳ ದುಃಖವುಳ್ಳವನಾಗಿಯೂ, ಶ್ರೇಷ್ಠವಾದ ಧನುರ್ಬಾಣಗಳನ್ನು ಧರಿಸಿದವನಾಗಿಯೂ, ವರವನ್ನು ಕೊಡುವ ನರಶ್ರೇಷ್ಠನಾದ ರಾಮನನ್ನು ನಾನು ಸದಾ ನಮಿಸುವೆನು ॥೪೨॥

ತ್ರಿಭುವನಕಮನೀಯರೂಪ ಮೀಡ್ಯಂ ರವಿಶತಭಾಸುರ ಮೀಹಿತಪ್ರದಾನಂ |
ಶರಣದ ಮನಿಶಂ ಸುರಾಗಮೂಲೆ ಕೃತನಿಲಯಂ ರಘುನಂದನಂ ಪ್ರಪದ್ಯೆ ||೪೩||
ಭವವಿಪಿನದವಾಗ್ನಿನಾಮಧೇಯಂ ಭವಮುಖದೈವತದೈವತಂ ದಯಾಳುಂ |
ದನುಜಪತಿಸಹಸ್ರಕೋಟಿನಾಶಂ ರವಿತನಯಾಸದೃಶಂ ಹರಿಂ ಪ್ರಪದ್ಯೆ ||೪೪||
ಅವಿರತಭವಭಾವನಾತಿದೂರಂ ಭವವಿಮುಖೈರ್ಮುನಿಭಿಃ ಸದೈವ ದೃಶ್ಯಂ |
ಭವಜಲಧಿಸುತಾರಣಾಂಘ್ರಿಪೋತಂ ಶರಣ ಮಹಂ ರಘುನಂದನಂ ಪ್ರಪದ್ಯೆ ||೪೫||
ಗಿರಿಶ ಗಿರಿಸುತಾ ಮನೋನಿವಾಸಂ ಗಿರಿವರಧಾರಣ ಮೀಹಿತಾಭಿರಾಮಂ |
ಸುರವರದನುಜೇಂದ್ರಸೇವಿತಾಂಘ್ರಿಂ ಸುರವರದಂ ರಘುನಾಯಕಂ ಪ್ರಪದ್ಯೆ ||೪೬||
ಪರಧನಪರದಾರವರ್ಜಿತಾನಾಂ ಪರಗುಣಭೂತಿಷು ತುಷ್ಟಮಾನಸಾನಾಂ |
ಪರಹಿತನಿರತಾತ್ಮನಾಂ ಸುಸೇವ್ಯಂ ರಘುವರ ಮಂಬುಜಲೋಚನಂ ಪ್ರಪದ್ಯೆ ||೪೭||

---

ಮೂರು ಲೋಕಗಳಿಗೂ ಮನೋಹರವಾದ ರೂಪವುಳ್ಳವನಾಗಿ ಸ್ತುತಿಸಲು ಯೋಗ್ಯನಾಗಿಯೂ ಅಸಂಖ್ಯವಾದ ಸೂರ್ಯನಂತೆ ಪ್ರಕಾಶಿಸುವನಾಗಿಯೂ, ಇಷ್ಟಾರ್ಥಗಳನ್ನು ಕೊಡುವನಾಗಿಯೂ, ಸರ್ವರಿಗೂ ವಾಸಸ್ಥಾನವನ್ನು ಕೊಡುವನಾಗಿಯೂ, ಕಲ್ಪವೃಕ್ಷದ ದಡದಲ್ಲಿ ಮಾಡಲ್ಪಟ್ಟ ಮನೆಯುಳ್ಳವನಾಗಿಯೂ ಇರುವ ರಾಮನನ್ನು ನಾನು ಸರ್ವದಾ ಶರಣುಹೊಂದುವೆನು ||೪೩||

ಅಜ್ಞಾನರೂಪವಾದ ಸಂಸಾರವೆಂಬ ವನಕ್ಕೆ ಕಾಡುಗಿಚ್ಚಾದ ನಾಮವುಳ್ಳವನಾಗಿಯೂ ಈಶ್ವರಾದಿಗಳಾದ ದೇವತೆಗಳಿಗೂ ದೇವನಾಗಿಯೂ, ದಯಾಶಾಲಿಯಾಗಿಯೂ ದಾನವ ಸಹಸ್ರಕೋಟಿಗಳಿಗೆ ನಾಶಕನಾಗಿಯೂ, ಯಮುನಿಗೆ ಸಮಾನವಾದ ಸರ್ವಕಾಲದಲ್ಲೂ ಸಂಸಾರವನ್ನು ಭಾವಿಸುವವರಿಗೆ ಅತಿ ದೂರನಾಗಿಯೂ, ಸಂಸಾರದಲ್ಲಿ ಅಭಿಮಾನವಿಲ್ಲದ ಮುನಿಗಳಿಂದ ಸರ್ವಕಾಲದಲ್ಲೂ ನೋಡಲು ಯೋಗ್ಯನಾಗಿಯೂ, ಸಂಸಾರಸಮುದ್ರವನ್ನು ದಾಟುವುದಕ್ಕೆ ನಾವೆಯಾದ ಪಾದವುಳ್ಳವನಾಗಿಯೂ ಇರುವ ಶ್ರೀರಾಮನನ್ನು ನಾನು ಶರಣುಹೊಂದುವೆನು ||೪೫||

ಪರಮೇಶ್ವರ ಪಾರ್ವತಿಯರ ಮನವೇ ಮನೆಯಾಗುಳ್ಳವನಾಗಿಯೂ, ಅವತಾರಾಂತರಗಳಲ್ಲಿ ಪರ್ವತಧಾರಿಯಾಗಿಯೂ, ಸ್ವರ್ವರಿಗೂ ಇಷ್ಟಾರ್ಥವನ್ನು ಕೊಡುವುದರಿಂದ ಮನೋಹರನಾಗಿಯೂ, ದೇವಶ್ರೇಷ್ಠರಿಂದಲೂ, ದಾನವಶ್ರೇಷ್ಠರಿಂದಲೂ ಸೇವಿತವಾದ ಪಾದವುಳ್ಳವನಾಗಿಯೂ, ದೇವತೆಗಳಿಗೆ ವರವನ್ನು ಕೊಡುವನಾಗಿಯೂ ಇರುವ ರಾಮನನ್ನು ನಾನು ಶರಣುಹೊಂದುವೆನು ||೪೬||

ಪರರಧನದಲ್ಲೂ, ಪರರಪತ್ನಿಯಲ್ಲೂ ತ್ಯಾಗಬುದ್ಧಿಯುಳ್ಳವರಾಗಿ ಪರರ ಗುಣ

ಸ್ಮಿತರುಚಿರ ವಿಕಾಸಿತಾನನಾಬ್ಜಂ ಅತಿಸುಲಭಂ ಸುರರಾಜನೀಲನೀಲಂ |
ಸಿತಜಲರುಹಚಾರುನೇತ್ರಶೋಭಂ ರಘುಪತಿ ಮೀಶಗುರೋರ್ಗುರುಂಪ್ರಪದ್ಯೇ ||೪೮||

ಹರಿಕಮಲಜಶಂಭುರೂಪಭೇದಾತ್ತ್ವಮಿಹ ವಿಭಾಸಿ ಗುಣತ್ರಯಾನುವೃತ್ತಃ |
ರವಿ ರಿವ ಜಲಪೂರಿತೋದಪಾತ್ರೇಷ್ವಮರಪತಿಸ್ತುತಿಪಾತ್ರಮೀಶಮೀಡೆ ||೪೯||

ರತಿ ಪತಿ ಶತಕೋಟಿ ಸುಂದರಾಂಗಂ ಶತಪಥಗೋಚರ ಭಾವನಾವಿದೂರಂ |
ಯತಿಪತಿಹೃದಯೆ ಸದಾವಿಭಾಂತಂ ರಘುಪತಿ ಮಾರ್ತಿಹರಂ ಪ್ರಭುಂ ಪ್ರಪದ್ಯೇ||೫೦||

ಇತ್ಯೇವಂ ಸ್ತುವತ ಸ್ತಸ್ಯಪ್ರಸನ್ನೋ ಭೂ ದ್ರಘೂತ್ತಮಃ |
ಉವಾಚ ಗಚ್ಛ ಭದ್ರಂ ತೇ ಮಮ ವಿಷ್ಣೋಃ ಪರಂ ಪದಂ ||೫೧||

---

ಮುಗುಳುನಗೆಯಿಂದ ಮನೋಹರವಾಗಿ ಪ್ರಕಾಶಿಸುವ ಮೊಗದಾವರೆಯುಳ್ಳ ವನಾಗಿಯೂ, ಬಿಳಿದಾವರೆಯ ದಳದಂತೆ ಮನೋಹರವಾದ ಕಣ್ಣುಗಳ ಕಾಂತಿ ಯುಳ್ಳವನಾಗಿಯೂ, ನೀಲಲೋಹಿತನಿಗೆ ತಂದೆಯಾದ ಬ್ರಹ್ಮನಿಗೂ ಕೂಡ ವೇದೋ ಪದೇಶವನ್ನು ಮಾಡಿದ ಶ್ರೀರಾಮನನ್ನು ನಾನು ಶರಣುಹೊಂದುವೆನು ||೪೮||

ಎಲೈ ಶ್ರೀರಾಮನೇ, ಸತ್ವರಜಸ್ತಮೋಗುಣಗಳನ್ನನುಸರಿಸಿದ ನೀನು ವಿಷ್ಣು ವಿಧಿ ರುದ್ರರ ರೂಪಭೇದದಿಂದ ಇಲ್ಲಿರಿಸಿತುಂಬಿದ ಜಲಪಾತ್ರೆಗಳಲ್ಲಿ ಸೂರ್ಯನಂತೆ ಪ್ರಕಾಶಿಸುತ್ತೀಯೆ. ಆದುದರಿಂದ ದೇವಶ್ರೇಷ್ಠರಾದವರುಗಳಿಗೂ ಸ್ತುತಿಪಾತ್ರ ನಾದಂತ ಈಶ್ವರನಾದ ನಿನ್ನನ್ನು ನಾನು ಸ್ತುತಿಸುವೆನು ||೪೯||

ಏಕೀಭವಿಸಿರುವ ಮನ್ಮಥ ಶತಕೋಟಿಗಳಂತೆ ಸುಂದರವಾದ ಅಂಗಗಳುಳ್ಳವ ನಾಗಿ ಸರ್ವತೋಮುಖವಾಗಿ ಹೊರಟಿರುವುದರಿಂದ ಶತಪಥವೆನಿಸುವ ಶ್ರುತಿಯನ್ನೋ ದುವ ಜನಗಳ ಭಾವನೆಗೆ ಸಮೀಪಸ್ಥನಾಗಿ ಯತಿಶ್ರೇಷ್ಠರ ಹೃದಯದಲ್ಲಿ ಪ್ರಕಾಶಿ ಸುವ ಸರ್ವದುಃಖ ಪರಿಹಾರಕನಾದ ಪ್ರಭುವಾದ ಶ್ರೀರಾಮನನ್ನು ನಾನು ಶರಣು ಹೊಂದುವೆನು ||೫೦||

ಎಂದು ಈ ಪ್ರಕಾರ ಸ್ತುತಿಸುತ್ತಿರುವ ಆ ಜಟಾಯುವಿಗೆ ಶ್ರೀರಾಮನು ಪ್ರಸನ್ನನಾಗಿ, ನಿನಗೆ ಶುಭವಾಗಲಿ. ವಿಷ್ಣುವಾದ ನನ್ನ ಉತ್ತಮವಾದ ಸ್ಥಾನವನ್ನು ಹೊಂದು ಎಂದು ಹೇಳಿದನು ||೫೧||

ಶೃಣೋತಿ ಯ ಇದಂ ಸ್ತೋತ್ರಂ ಲಿಖಿ ದ್ವಾ ನಿಯತಃ ಪಠೇತ್ |
ಸ ಯಾತಿ ಮಮ ಸಾರೂಪ್ಯಂ ಮರಣೆ ಮತ್ಸ್ಮೃತಿಂ ಲಭೇತ್ ||೫೨||

ಇತಿ ರಾಘವ ಭಾಷಿತಂ ತದಾ ಶ್ರುತವಾನ್ ಹರ್ಷಸಮಾಕುಲೋ ದ್ವಿಜಃ |
ರಘುನಂದನಸಾಮ್ಯ ಮಾಸ್ಥಿತಃ ಪ್ರಯಯೌ ಬ್ರಹ್ಮಸುಪೂಜಿತಂ ಪದಂ ||೫೩||

|| ಅಷ್ಟಮಸ್ಸರ್ಗ ಸ್ಸಮಾಪ್ತಃ ||



---

ಯಾರು ಈ ಸ್ತೋತ್ರವನ್ನು ಕೇಳುವರೋ, ಯಾರು ಬರೆಯುವರೋ, ಯಾರು ನಿಯಮದಿಂದ ಪಠಿಸುವರೋ ಅವರು ನನ್ನ ಸಾರೂಪ್ಯ ಮುಕ್ತಿಯನ್ನು ಪಡೆಯುವರು. ಮರಣಕಾಲದಲ್ಲಿ ನನ್ನ ಸ್ಮರಣೆಯನ್ನು ಪಡೆಯುವರು ||೫೨||

ಇಂತಾಗ ರೂಪಾಂತರವನ್ನು ಧರಿಸಿರುವ ಪಕ್ಷಿರಾಜನು ರಾಮನ ವಾಕ್ಯವನ್ನು ಕೇಳಿ, ಕೂಡಲೇ ಶ್ರೀರಾಮನ ಸಮಾನರೂಪತ್ವವನ್ನು ಪಡೆದು ಬ್ರಹ್ಮನಿಂದ ಪೂಜಿತವಾದ ವೈಕುಂಠವನ್ನು ಸೇರಿದನು ||೫೩||

|| ಇಲ್ಲಿಗೆ ಎಂಟನೆಯ ಸರ್ಗವು ಮುಗಿದುದು ||



# ನವಮಸ್ಸರ್ಗಃ.

ಶ್ರೀ ಮಹಾದೇವಃ ||

ತತೋ ರಾಮೋ ಲಕ್ಷ್ಮಣೇನ ಜಗಾಮ ವಿಪಿನಾಂತರಂ |
ಪುನರ್ದುಃಖಂ ಸಮಾಶ್ರಿತ್ಯ ಸೀತಾನ್ವೇಷಣ ತತ್ಪರಃ ||೧||
ತತ್ರಾದ್ಭುತತಮಾಕಾರೋ ರಾಕ್ಷಸಃ ಪ್ರತ್ಯದೃಶ್ಯತ |
ವಕ್ಷಸ್ಯೇವ ಮಹಾವಕ್ತ್ರ ಶ್ಚಕ್ಷುರಾದಿ ವಿವರ್ಜಿತಃ ||೨||
ಬಾಹೂ ಯೋಜನಮಾತ್ರೇಣ ವ್ಯಾವೃತೌ ತಸ್ಯ ರಕ್ಷಸಃ |
ಕಬಂಧೋ ನಾಮ ದೈತ್ಯೇಂದ್ರ ಸ್ಸರ್ವಸತ್ವವಿಹಿಂಸಕಃ ||೩||
ತದ್ಬಾಹ್ವೋ ರ್ಮಧ್ಯದೇಶೇ ತೌ ಚರಂತೌ ರಾಮಲಕ್ಷ್ಮಣೌ |
ದದರ್ಶತು ರ್ಮಹಾಸತ್ವಂ ತದ್ಬಾಹುಪರಿವೇಷ್ಟಿತೌ ||೪||
ರಾಮಃ ಪ್ರೋವಾಚ ವಿಹಸನ್ ಪಶ್ಯ ಲಕ್ಷ್ಮಣ ರಾಕ್ಷಸಂ |
ಶಿರಃ ಪಾದವಿಹೀನೋಽಯಂ ಯಸ್ಯ ವಕ್ಷಸಿ ಚಾನನಂ ||೫||

---

ಪಾರ್ವತಿಯನ್ನು ಕುರಿತು ಪರಮೇಶ್ವರನು ಹೇಳುವನು ||

ಆಬಳಿಕ ಶ್ರೀರಾಮನು ಲಕ್ಷ್ಮಣನಿಂದೊಡಗೂಡಿ ಮತ್ತೊಂದು ಅರಣ್ಯಕ್ಕೆ ಹೋದನು. ಮರಳಿ ದುಃಖಪಟ್ಟು ಸೀತೆಯನ್ನು ಹುಡುಕುವುದರಲ್ಲಿ ಆಸಕ್ತನಾದನು||

ಅಲ್ಲಿ ಅತ್ಯಾಶ್ಚರ್ಯವಾದ ಆಕಾರವುಳ್ಳವನಾಗಿಯೂ, ಎದೆಯಲ್ಲಿ ಮೊಗವುಳ್ಳವನಾಗಿಯೂ ನೇತ್ರಾದಿ ಅಂಗಗಳಿಲ್ಲದವನಾಗಿರುವ ರಾಕ್ಷಸನು ಕಾಣಿಸಿದನು||

ಆ ರಾಕ್ಷಸನ ತೋಳುಗಳು ಯೋಜನಪರ್ಯಂತವಾಗಿ ವ್ಯಾಪಿಸಿಕೊಂಡಿದ್ದವು ಅವುಗಳಿಂದ ಸರ್ವಪ್ರಾಣಿಗಳಿಗೂ ಹಿಂಸಾಕರನಾದ ಆ ದೈತ್ಯಶ್ರೇಷ್ಠನು ತಲೆಹೋದ ಮುಂಡದಂತಿರುವನಾದುದರಿಂದ ಕಬಂಧನೆಂದು ಪ್ರಸಿದ್ಧನಾಗಿದ್ದನು ||೩||

ಇವನ ತೋಳುಗಳ ಮಧ್ಯದಲ್ಲಿ ಸಂಚರಿಸುವ ರಾಮಲಕ್ಷ್ಮಣರು ಅವನ ತೋಳುಗಳಿಂದ ಸುತ್ತಲ್ಪಟ್ಟವರಾಗಿ ಆ ಮಹತ್ತಾದ ಪ್ರಾಣಿಯನ್ನು ಕಂಡರು ||೪||

ಆಗ ರಾಮನು ನಗುತ್ತಾ ಎಲೈ ಲಕ್ಷ್ಮಣನೇ, ಯಾವನಿಗೆ ಎದೆಯಲ್ಲಿ ಮೊಗ

ಬಾಹುಭ್ಯಾಂ ಲಭ್ಯತೆ ಯದ್ಯತ್ತತ್ತದ್ಭಕ್ಷ್ಯ ಸ್ಥಿತೌ ಧ್ರುವಂ |
ಆವಾ ಮಪ್ಯೇ ತಯೋ ರ್ಬಾಹ್ವೋ ರ್ಮಧ್ಯೇ ಸಂಕಲಿತೌ ಧ್ರುವಂ ||೬||

ಗಂತು ಮನ್ಯತ್ರ ಮಾರ್ಗೋ ನ ದೃಶ್ಯತೆ ರಘುನಂದನ |
ಕಿಂ ಕರ್ತವ್ಯ ಮಿತೋಽಸ್ಮಾಭಿ ರಿದಾನೀಂ ಭಕ್ಷ್ಯಯೋ ಕ್ಸನೌ ||೭||

ಲಕ್ಷ್ಮಣ ಸ್ತು ಮುವಾಚೇದಂ ಕಿಂ ವಿಚಾರೇಣ ರಾಘವ |
ಆವಾ ಮೇಕೈಕ ಮವ್ಯಗ್ರೌ ಛಿಂದ್ಯಾಂ ರಕ್ಷೋ ಭುವೌ ಧ್ರುವಂ ||೮||

ತಥೇತಿ ರಾಮಃ ಖಡ್ಗೇನ ಭುಜಂ ದಕ್ಷಿಣ ಮಚ್ಛಿನತ್ |
ತಥೈವ ಲಕ್ಷ್ಮಣೊ ವಾಮಂ ಚಿಚ್ಛೇದ ಭುಜ ಮಂಜಸಾ ||೯||

ತತೋಽತಿ ವಿಸ್ಮಿತೊ ದೈತ್ಯಃ ಕೌ ಯುವಾಂ ಸುರಪುಂಗವೌ |
ಮದ್ಬಾಹುಚ್ಛೇದಕೌ ಲೋಕೆ ದಿವಿ ದೇವೇಷು ವಾ ಕುತಃ ||೧೦||

---

ವಿರುವುದೋ ಆ ರಾಕ್ಷಸನು ತಲೆ ಕಾಲುಗಳಿಂದ ಹೀನನಾಗಿರುವನು, ಇವನನ್ನು ನೋಡು ||೫||

ಇವನು ತೋಳುಗಳಿಂದ ಯಾವಯಾವ ಪದಾರ್ಥವನ್ನು ಸುತ್ತಿಕೊಂಡಿರುವನೋ ಅದದನ್ನು ತಿನ್ನುತ್ತಿರುವನೆಂಬುದು ನಿಶ್ಚಯವು, ನಾವೂಸಹ ಇವನ ತೋಳುಗಳ ನಡುವೆ ನಿಶ್ಚಯವಾಗಿಯೂ ಸಿಕ್ಕಿರುವೆವು ||೬||

ಎಲೈ ರಘುನಂದನನೇ, ಹೋಗುವುದಕ್ಕೆ ಮತ್ತೊಂದುಕಡೆ ಮಾರ್ಗವು ಕಾಣುವುದಿಲ್ಲ. ಇಲ್ಲಿಂದ ಆಚೆಗೆ ಈಗನಾವು ಹೋಗುವುದಕ್ಕೆ ಏನುಮಾಡುವುದು ? ಆ ರಾಕ್ಷಸನು ನಮ್ಮನ್ನು ಭಕ್ಷಿಸುವನು ||೭||

ಎಂದು ರಾಮನು ಹೇಳಲು, ಲಕ್ಷ್ಮಣನು ರಾಮನಿಗೆ ಈ ರೀತಿಯಾಗಿ ಹೇಳಿದನು. ಎಲೈ ರಾಘವನೇ ! ಈಗ ವಿಚಾರದಿಂದೇನು ? ನಾವಿಬ್ಬರೂ ಚಪಲಪಡದವರಾಗಿ ಅವನ ತೋಳುಗಳನ್ನು ಒಂದೊಂದಾಗಿ ನಿಶ್ಚಯವಾಗಿಯೂ ಕತ್ತರಿಸೋಣ ||೮||

ಹಾಗೆಯೇ ಆಗಲೆಂದು ರಾಮನು ಬಲದ ತೋಳನ್ನು ಕತ್ತಿಯಿಂದ ಕತ್ತರಿಸಿದನು, ಹಾಗೆಯೇ ಜಾಗ್ರತೆಯಾಗಿ ಲಕ್ಷ್ಮಣನು ಎಡದತೋಳನ್ನು ಕತ್ತರಿಸಿದನು||

ಅದರಿಂದ ಅತಿಯಾಗಿ ಆಶ್ಚರ್ಯಪಟ್ಟ ದೈತ್ಯನು ದೇವತೆಗಳಿಗಿಂತಲೂ ಅಧಿಕರಾದ ನೀವು ಯಾರು ? ಸ್ವರ್ಗಲೋಕದಲ್ಲಿರುವ ದೇವತೆಗಳಲ್ಲಾದರೂ ಯಾರೂ ನನ್ನ ತೋಳುಗಳನ್ನು ಕತ್ತರಿಸಲಾರರು ||೧೦||

ತತೋಽಬ್ರವೀ ದ್ಧಸನ್ನೇವ ರಾಮೋ ರಾಜೀವಲೋಚನಃ |
ಅಯೋಧ್ಯಾಧಿಪತಿಃ ಶ್ರೀಮಾನ್ ರಾಜಾ ದಶರಥೋ ಮಹಾನ್ ||೧೧||

ರಾಮೋಽಹಂ ತಸ್ಯ ಪುತ್ರೋಽಸೌ ಭ್ರಾತಾ ಮೇ ಲಕ್ಷ್ಮಣಸ್ಸುಧೀಃ |
ಮಮ ಭಾರ್ಯಾ ಜನಕಜಾ ಸೀತಾ ತ್ರೈಲೋಕ್ಯಸುಂದರೀ ||೧೨||

ಆವಾಂ ಮೃಗಯಯಾ ಯಾತೌ ತದಾ ಕೇನಾಪಿ ರಕ್ಷಸಾ |
ಸೀತಾಂ ನೀತಾಂ ವಿಚಿನ್ವಂತೌ ಚಾಗತೌ ಘೋರಕಾನನೇ ||೧೩||

ಬಾಹುಭ್ಯಾಂ ವೇಷ್ಟಿತೌ ವಕ್ರ ತವ ಪ್ರಾಣರಿರಕ್ಷಯಾ |
ಛಿನ್ನೌ ತವಭುಜೌ ತ್ವಂ ಚ ಕೋ ವಾ ವಿಕಟರೂಪಧೃಕ್ ||೧೪||

ಕಬಂಧಃ ||

ಧನ್ಯೋಽಹಂ ಯದಿ ರಾಮ ಸ್ತ್ವ ಮಾಗತೋಽಸಿ ಮಮಾಂತಿಕಂ |
ಪುರಾ ಗಂಧರ್ವ ರಾಜೋಽಹಂ ರೂಪಯೌವನದರ್ಪಿತಃ ||೧೫||

---

ಎಂದು ಹೇಳಲು, ಬಳಿಕ ಪುಂಡರೀಕಾಕ್ಷನಾದ ರಾಮನು ನಗುತ್ತ ಹೇಳುವನು, ಅಯೋಧ್ಯಾಪುರಕ್ಕೆ ಅಧಿಪತಿಯಾದ ಶ್ರೀಮಂತನಾದ ದಶರಥನೆಂಬ ಮಹಾರಾಜನಿದ್ದನು ||೧೧||

ಅವನಿಗೆ ಮಗನಾದ ರಾಮನೇ ನಾನು, ಬುದ್ಧಿಶಾಲಿಯಾದ ಈ ಲಕ್ಷ್ಮಣನು ನನ್ನ ತಮ್ಮನು, ತ್ರಿಲೋಕೈಕಸುಂದರಿಯಾದ ಜನಕರಾಜನ ಮಗಳಾದ ಸೀತೆಯು ನನ್ನ ಹೆಂಡತಿಯು ||೧೨||

ನಾವಿಬ್ಬರೂ ಬೇಟೆಯ ನಿಮಿತ್ತವಾಗಿ ಹೋಗಿದ್ದ ಕಾಲದಲ್ಲಿ ಯಾವನೋ ಒಬ್ಬ ರಾಕ್ಷಸನಿಂದ ತೆಗೆದುಕೊಂಡು ಹೋಗಲ್ಪಟ್ಟ ಸೀತೆಯನ್ನು ಹುಡುಕುತ್ತಾ ಭಯಂಕರವಾದ ಈ ಅರಣ್ಯಕ್ಕೆ ಬಂದೆವು ||೧೩||

ಇಲ್ಲಿ ನಿನ್ನ ತೋಳುಗಳಿಂದ ಸುತ್ತಲ್ಪಟ್ಟೆವು. ಪ್ರಾಣರಕ್ಷಣೆಯ ಅಪೇಕ್ಷೆಯಿಂದ ನಿನ್ನ ತೋಳುಗಳು ನಮ್ಮಿಬ್ಬರಿಂದ ಕತ್ತರಿಸಲ್ಪಟ್ಟವು. ವಕ್ರವಾದ ರೂಪದಿಂದ ಕೂಡಿರುವ ನೀನು ಯಾರು ಹೇಳು ? ||೧೪||

ಎಂದು ರಾಮನು ಕೇಳಲು, ಅದಕ್ಕೆ ಕಬಂಧನು ಶ್ರೀರಾಮನಾದ ನೀನು ನನ್ನ ಸಮೀಪಕ್ಕೆ ಬರಲು ನಾನು ಧನ್ಯನಾದೆನು. ನಾನು ಪೂರ್ವದಲ್ಲಿ ರೂಪದಿಂದಲೂ, ಯೌವನದಿಂದಲೂ ಕೂಡಿ ಗರ್ವಪಟ್ಟ ಗಂಧರ್ವರಾಜನು ||೧೫||

ವಿಚರ ನ್ಲೋಕ ಮಖಿಲಂ ವರನಾರೀಮನೋಹರಃ |
ತಪಸಾ ಬ್ರಹ್ಮಣೊ ಲಬ್ಧ ಮನಧ್ಯತ್ವಂ ರಘೂತ್ತಮ ||೧೬||

ಅಷ್ಟಾವಕ್ರಂ ಮುನಿಂ ದೃಷ್ಟ್ವಾ ಕದಾಚಿ ದಹಸಂ ಪುರಾ |
ಕ್ರುದ್ಧೋ ಸಾ ವಾಹ ದುಷ್ಟ ತ್ವಂ ರಾಕ್ಷಸೊ ಭವ ದುರ್ಮತೆ ||೧೭||

ಅಷ್ಟಾವಕ್ರಃ ಪುನಃ ಪ್ರಾಹ ವಂದಿತೊ ಮೆ ದಯಾಪರಃ |
ಶಾಪಸ್ಯಾಂತಂ ಚ ಮೆ ಪ್ರಾಹ ತಪಸಾ ದ್ಯೋತಿತಪ್ರಭಃ ||೧೮||

ತ್ರೇತಾಯುಗೆ ದಾಶರಥಿ ರ್ಭೂತ್ವಾ ನಾರಾಯಣಸ್ಸ್ವಯಂ |
ಆಗಮಿಷ್ಯತಿ ತೇ ಬಾಹೂ ಛಿದ್ಯೇತೇ ಯೋಜನಾಯುತಾ |
ತೇನ ಶಾಪಾ ದ್ವಿನಿರ್ಮುಕ್ತೊ ಭವಿಷ್ಯಸಿ ಯಥಾ ಪುರಾ ||೧೯||

ಇತಿ ಶಪ್ತೋಹ ಮದ್ರಾಕ್ಷಂ ರಾಕ್ಷಸೀಂ ತನು ಮಾತ್ಮನಃ |
ಕದಾಚಿ ದ್ದೇವ ರಾಜಾನ ಮಭ್ಯದ್ರವ ಮಹಂ ರುಷಾ |
ಸೋಪಿ ವಜ್ರೇಣ ಮಾಂ ರಾಮ ಶಿರೋದೇಶೇ ಭ್ಯತಾಡಯತ್ ||೨೦||

---

ಉತ್ತಮರಾದ ಸ್ತ್ರೀಯರುಗಳಿಗೆ ಮನೋಹರನಾಗಿ ಲೋಕವೆಲ್ಲವನ್ನೂ ಸಂಚರಿಸುತ್ತಿದ್ದೆನು. ಎಲೈ ರಘೂತ್ತಮನೇ ತಪಸ್ಸನ್ನು ಮಾಡಿ ಬ್ರಹ್ಮನಿಂದ ನಾನು ಯಾರಿಂದಲೂ ಸಾಯದಂತೆ ವರವನ್ನು ಪಡೆದೆನು ||೧೬||

ಪೂರ್ವದಲ್ಲಿ ಒಂದುದಿನ ಅಷ್ಟಾವಕ್ರ ಮುನಿಯನ್ನು ಕಂಡು ಹಾಸ್ಯಮಾಡಿದೆನು. ಮುನಿಯು ಕೋಪಗೊಂಡು ಎಲಾ ದುಷ್ಟನಾದ ದುರ್ಬುದ್ಧಿಯೇ ನೀನು ರಾಕ್ಷಸನಾಗೆಂದು ಶಪಿಸಿದನು ||೧೭||

ನಾನು ನಮಿಸಲ್ಪಟ್ಟವನಾದುದರಿಂದ ದಯಾಯುಕ್ತನಾಗಿ ನನ್ನೊಡನೆ ಮಾತನಾಡಿ ತಪದಿಂದ ಪ್ರಕಾಶಿತವಾದ ಜ್ಞಾನದೃಷ್ಟಿಯುಳ್ಳ ಆ ಮುನಿಯು ನನಗೆ ಶಾಪದ ಕೊನೆಯನ್ನು ಹೇಳಿದನು ||೧೮||

ತ್ರೇತಾಯುಗದಲ್ಲಿ ನಾರಾಯಣನು ದಶರಥನ ಮಗನಾಗಿ ಹುಟ್ಟಿ ಅವನೇ ನಿನ್ನ ಸಮೀಪಕ್ಕೆ ಬರುವನು. ಯೋಜನಪರ್ಯಂತವಾದ ನಿನ್ನ ತೋಳುಗಳು ಕತ್ತರಿಸಲ್ಪಡುವುದು. ಆಗ ನೀನು ಶಾಪದಿಂದ ವಿಮುಕ್ತನಾಗಿ ಪೂರ್ವದಂತೆ ಆಗುವೆ ||

ಎಂದು ಶಪಿಸಲ್ಪಟ್ಟ ನಾನು ನನ್ನ ಶರೀರವನ್ನು ರಾಕ್ಷಸಶರೀರವನ್ನಾಗಿ ಕಂಡೆನು. ಎಲೈ ರಾಮನೇ! ಒಂದುದಿನ ನಾನು ರೋಷದಿಂದ ಇಂದ್ರನನ್ನು ಅಟ್ಟ

ತದಾ ಶಿರೋಗತಂ ಕುಕ್ಷಿಂ ಪಾದೌ ಚ ರಘುನಂದನ ।
ಬ್ರಹ್ಮದತ್ತವರಾನ್ಮೃತ್ಯುರ್ನಾಭೂನ್ಮೇ ವಜ್ರತಾಡನಾತ್ ॥೨೧॥
ಮುಖಾಭಾವೇ ಕಥಂ ಜೀವೇದಯಮಿತ್ಯಮರಾಧಿಪಂ ।
ಊಚುಸ್ಸರ್ವೇ ದಯಾವಿಷ್ಟಾ ಮಾಂ ವಿಲೋಕ್ಯಾಸ್ಯವರ್ಜಿತಂ ॥೨೨॥
ತತೋ ಮಾಂ ಪ್ರಾಹ ಮಘವಾ ಜಠರೇ ತೇ ಮುಖಂ ಭವೇತ್ ।
ಬಾಹೂ ತೇ ಯೋಜನಾಯಾಮೌ ಭವಿಷ್ಯತ ಇತೋ ವ್ರಜ ॥೨೩॥
ಇತ್ಯುಕ್ತೋಽತ್ರ ವಸನ್ನಿತ್ಯಂ ಬಾಹುಭ್ಯಾಂ ವನಗೋಚರಾನ್ ।
ಭಕ್ಷಯನ್ ವ್ಯಥನಾ ಬಾಹೂ ಖಂಡಿತೌ ಮೇ ತ್ವಯಾನಘ ॥೨೪॥
ಇತಃ ಪರಂ ಮಾಂ ಶ್ವಭ್ರಸ್ಥೇ ನಿಕ್ಷಿಪಾಗ್ನಿಂ ಘನಾವೃತೇ ।
ಅಗ್ನಿನಾ ದಹ್ಯಮಾನೋಽಹಂ ತ್ವಯಾ ರಘುಕುಲೋತ್ತಮ ।
ಪೂರ್ವರೂಪಮನುಪ್ರಾಪ್ಯ ಭಾರ್ಯಾಮಾರ್ಗಂ ವದಾಮಿ ತೇ ॥೨೫॥

---

...ಂಡು ಹೋದೆನು ಅವನು ವಜ್ರಾಯುಧದಿಂದ ನನ್ನ ತಲೆಯಮೇಲೆ ಹೊಡೆ... ॥೨೦॥

ಆಗ ಎಲೈ ರಘುನಂದನನೇ ನಾನು ಆ ಏಟಿನಿಂದ ಕುಕ್ಕರಿಸುವಲ್ಲಿ ತಲೆಯೂ ...ಲುಗಳೂ ಸಹ ಹೊಟ್ಟೆಯನ್ನು ಸೇರಿದವು ಬ್ರಹ್ಮನು ಕೊಟ್ಟ ವರದಿಂದ ನನಗೆ ...ವೇಂದ್ರನ ವಜ್ರಾಯುಧದ ಪೆಟ್ಟಿನಿಂದ ಮರಣವಾಗಲಿಲ್ಲ ॥೨೧॥

ಆಗ ಅಲ್ಲಿದ್ದವರೆಲ್ಲರೂ ಮುಖವಿಲ್ಲದ ನನ್ನನ್ನು ನೋಡಿ ದಯೆಯಿಂದ ...ದವರಾಗಿ, ಮುಖವಿಲ್ಲದಿರಲು ಇವನು ಹ್ಯಾಗೆ ಜೀವಿಸುವನೆಂದು ದೇವೇಂದ್ರ... ಕೇಳಿದರು ॥೨೨॥

ಬಳಿಕ ದೇವೇಂದ್ರನು ನನ್ನನ್ನು ಕುರಿತು, ನಿನಗೆ ಹೊಟ್ಟೆಯಲ್ಲಿ ಮುಖವಾ...ದು, ತೋಳುಗಳು ಯೋಜನಪರ್ಯಂತವಾಗಿ ಬೆಳೆಯುವುವು, ಅದರಿಂದ ನೀನು ...ಸುತ್ತೀಯೆ, ಇತ್ತ ಕಡೆ ಹೋಗೆಂದು ಹೇಳಿದನು ॥೨೩॥

ಎಲೈ ನಿರ್ದೋಷಿಯಾದ ಸ್ವಾಮಿಯೇ ಈರೀತಿ ದೇವೇಂದ್ರನಿಂದ ಹೇಳಲ್ಪಟ್ಟ... ಇಲ್ಲಿರುತ್ತಾ ಸರ್ವಕಾಲದಲ್ಲೂ ವನದಲ್ಲಿ ಕಂಡ ಪ್ರಾಣಿಗಳನ್ನು ತೋಳುಗ... ಎಳೆದುಕೊಂಡು ತಿನ್ನುತ್ತಿರುವೆನು. ಈಗ ನನ್ನ ತೋಳುಗಳು ನಿನ್ನಿಂದ ...ಸಲ್ಪಟ್ಟವು ॥೨೪॥

ಎಲೈ ರಘುಕುಲೋತ್ತಮನೇ! ಇನ್ನುಮೇಲೆ ನನ್ನನ್ನು ಅಗ್ನಿಕಾಷ್ಠಗಳಿಂದ

ಇತ್ಯುಕ್ತೇ ಲಕ್ಷ್ಮಣೇ ನಾಶು ಶ್ವಭ್ರಂ ನಿರ್ಮಾಯ ತತ್ರತಂ |
ನಿಕ್ಷಿಪ್ಯ ಪ್ರಾದಹತ್ಕಾಷ್ಠೈ ಸ್ತತೋ ದೇಹಾ ತ್ಸಮುತ್ಥಿತಃ |
ಕಂದರ್ಪಸದೃಶಾಕಾರಃ ಸರ್ವಾಭರಣಭೂಷಿತಃ ||೨೬||

ರಾಮಂ ಪ್ರದಕ್ಷಿಣಂ ಕೃತ್ವಾ ಸಾಷ್ಟಾಂಗಂ ಪ್ರಣಿಪತ್ಯ ಚ |
ಕೃತಾಂಜಲಿ ರುವಾಚೇದಂ ಭಕ್ತಿಗದ್ಗದಯಾ ಗಿರಾ ||೨೭||

ಗಂಧರ್ವಃ ||

ಸ್ತೋತು ಮುತ್ಸಹತೇ ಮೇ ದ್ಯ ಮನೋ ರಾಮಾತಿಸಂಭ್ರಮಾತ್ |
ತ್ವಾ ಮನಂತ ಮನಾದ್ಯಂತಂ ಮನೋ ವಾಚಾ ಮಗೋಚರಂ ||೨೮||

ಸೂಕ್ಷ್ಮಂ ತೇ ರೂಪ ಮವ್ಯಕ್ತಂ ದೇಹದ್ವಯ ವಿಲಕ್ಷಣಂ |
ದೃಗ್ರೂಪ ಮಿತರ ತ್ಸರ್ವಂ ದೃಶ್ಯಂ ಜಡಮನಾತ್ಮಕಂ ||೨೯||

ತತ್ಕಥಂ ತ್ವಾಂ ವಿಜಾನೀಯಾ ದ್ವ್ಯತಿರಿಕ್ತಂ ಮನಃ ಪ್ರಭೋ |
ಬುಧ್ಯಾತ್ಮಾ ಭಾಸಯೊ ರೈಕ್ಯಂ ಜೀವ ಇತ್ಯಭಿಧೀಯತೇ ||೩೦||

---

ಸುತ್ತುವರೆಯಲ್ಪಟ್ಟಿರುವ ಹಳ್ಳದಲ್ಲಿ ಹಾಕು. ಅಗ್ನಿಯಿಂದ ಸುಡಲ್ಪಟ್ಟ ನಾನು ಪೂರ್ವರೂಪವನ್ನು ಹೊಂದಿ ನಿನ್ನ ಪತ್ನಿಯ ಮಾರ್ಗವನ್ನು ಕೇಳುವೆನು ||೨೫||

ಈ ರೀತಿ ಅವನಿಂದ ಹೇಳಲ್ಪಡಲು, ರಾಮನು ಲಕ್ಷ್ಮಣನೊಡನೆ ಹಳ್ಳವನ್ನು ತೋಡಿ ಅದರಲ್ಲಿ ಅವನನ್ನಿರಿಸಿ ಕಾಷ್ಠಗಳಿಂದ ದಹಿಸಿದನು. ಮನ್ಮಥನಿಗೆ ಸರಿಯಾದ ಆಕಾರವುಳ್ಳವನಾಗಿ ಸರ್ವಾಭರಣಗಳಿಂದ ಅಲಂಕರಿಸಲ್ಪಟ್ಟ ಪುರುಷನು ಆ ದೇಹದಿಂದ ಎದ್ದನು ||೨೬||

ಆ ಗಂಧರ್ವನು ಶ್ರೀರಾಮನನ್ನು ಪ್ರದಕ್ಷಿಣೆಮಾಡಿ ಸಾಷ್ಟಾಂಗವಾಗಿ ನಮಿಸಿ ಅಂಜಲಿಬದ್ಧನಾಗಿ ಭಕ್ತಿಯಿಂದ ಗದ್ಗದಧ್ವನಿಯಿಂದ ಹೇಳಿದನು ||೨೭||

ಎಲೈ ಶ್ರೀರಾಮನೇ, ಈಗ ನನ್ನ ಮನಸ್ಸು ಮನಸ್ಸಿಗೂ, ವಾಕ್ಕಿಗೂ, ಅಗೋಚರನಾಗಿ ದೇಶಕಾಲವಸ್ತುಪರಿಚ್ಛೇದವಿಲ್ಲದ, ಉತ್ಪತ್ತಿಗಳಿಲ್ಲದ ನಿನ್ನನ್ನು ಅತಿ ಸಂಭ್ರಮದಿಂದ ಸ್ತುತಿಸಲು ಉತ್ಸಾಹಪಡುತಲಿದೆ ||೨೮||

ಸೂಕ್ಷ್ಮವಾದ ನಿನ್ನ ರೂಪವು ವ್ಯಕ್ತವಲ್ಲದ್ದಾದರೂ ಸ್ಥೂಲಸೂಕ್ಷ್ಮ ದೇಹಗಳಿಗೆ ಭಿನ್ನವಾಗಿಯೂ, ದೃಗ್ರೂಪವಾಗಿರುವುದು. ಇತರವಾದ ಎಲ್ಲವೂ ದೃಶ್ಯವಾಗಿಯೂ, ಜಡವಾಗಿಯೂ ಆತ್ಮನಿಗೆ ಬಿನ್ನವಾಗಿರುವುದು ||೨೯||

ಎಲೈ ಪ್ರಭುವೇ! ಮನವು ಸ್ವಭಿನ್ನವಾಗಿ ದೃಗ್ರೂಪದಿಂದಿರುವ ನಿನ್ನನ್ನು

ಬುಧ್ಯಾದಿಸಾಕ್ಷೀ ಬ್ರಹ್ಮೈವ ತಸ್ಮಿ ನ್ನಿರ್ವಿಷಯೆ ಖಿಲಂ |
ಆರೋಪ್ಯತೇ ಜ್ಞಾನವಶಾ ನ್ನಿರ್ವಿಕಾರೆ ಖಿಲಾತ್ಮನಿ ||೩೧||

ಹಿರಣ್ಯಗರ್ಭ ಸ್ತೇ ಸೂಕ್ಷ್ಮಂ ಸ್ಥೂಲಂ ದೇಹಂ ವಿರಾಟ್ಸ್ಮೃತಂ |
ಭಾವನಾವಿಷಯೊ ರಾಮ ಸೂಕ್ಷ್ಮಂ ತೆ ಧ್ಯಾತೃಮಂಗಳಂ |
ಭೂತಂ ಭವ್ಯಂ ಭವಿಷ್ಯಚ್ಚ ಯತ್ರೇದಂ ದೃಶ್ಯತೇ ಜಗತ್ ||೩೨||

ಸ್ಥೂಲೆಂಡಕೋಶೇ ದೇಹೇತೇ ಮಹದಾದಿಭಿರಾವೃತಃ |
ಸಪ್ತಭಿ ಸ್ಸೂತ್ತರಗುಣ್ಯೆ ರ್ವೈರಾಜೋ ಧಾರಣಾಶ್ರಯಃ ||೩೩||

ತ್ವ ಮೇವ ಸರ್ವಕೈವಲ್ಯಂ ಲೋಕಾಸ್ತೆ ವಯವಾ ಸ್ಮೃತಾಃ |
ಪಾತಾಳಂತೆ ಪಾದಮೂಲಂ ಪಾರ್ಷ್ಣಿಸ್ತವ ಮಹಾತಲಂ ||೩೪||

---

ಎಂತು ತಿಳಿದೀತು. ಬುದ್ಧಿಗೂ ಅದನ್ನು ವ್ಯಾಪಿಸಿರುವ ಆತ್ಮನ ಪ್ರತಿಬಿಂಬದಂತಿರುವ ಪ್ರಕಾಶಕ್ಕೂ ಏಕೀಭಾವವೇ ಜೀವವೆಂದರ್ಥವು. ಬುದ್ಧಿಯನ್ನು ವ್ಯಾಪಿಸಿದೆ ಎಂದು ತಿಳಿಯುವುದರಿಂದ ಚಿದಾಭಾಸನೆನಿಸುವ ಪರಮಾತ್ಮನೇ ಜೀವನೆಂದು ಹೇಳಲ್ಪಡುವು ದೆಂದು ತಾತ್ಪರ್ಯ ||೩೦||

ಬುಧ್ಯಾದಿಗಳಿಗೆ ಸಾಕ್ಷಿಯಾದದ್ದು ಬ್ರಹ್ಮವೇ, ಲಕ್ಷ್ಯವಾಗದೆ ನಿರ್ವಿಷಯ ವೆನಿಸುವಂಥಾದ್ದು ಸರ್ವರಿಗೂ ಆತ್ಮನಾಗಿದ್ದಾಗ್ಯೂ ವಿಕಾರವಿಲ್ಲದಿರುವ ಆ ಬ್ರಹ್ಮ ದಲ್ಲಿ ಅಜ್ಞಾನದಿಂದ ಜೋದ್ಧೃತ್ವ ಮೊದಲಾಗಿ ಎಲ್ಲವೂ ಆರೋಪಿಸಲ್ಪಡುತ್ತಲಿದೆ ಎಂದರ್ಥ. ನಾನೇ ಜ್ಞಾತೃವು ಕರ್ತೃವೆಂದು ವಿವೇಕದಿಂ ತಿಳಿಯುವನೆಂದು ತಾತ್ಪರ್ಯ||

ಎಲೈ ರಾಮನೇ! ನಿನ್ನ ಸೂಕ್ಷ್ಮದೇಹವೇ ಹಿರಣ್ಯಗರ್ಭನು, ಸ್ಥೂಲದೇಹವೇ ವಿರಾಟ್ಪುರುಷನೆಂದು ಶೃತಿಯಿಂದ ವ್ಯಕ್ತವಾಗುವುದು. ಕಳೆದದ್ದು, ಇರುವುದು, ಬರುವುದು ಸಹ ಜಗತ್ತೆಲ್ಲವೂ ಎಲ್ಲಿ ಕಾಣಬರುವುದೋ, ಧ್ಯಾನವನ್ನು ಮಾಡತಕ್ಕ ವರಿಗೆ ಮಂಗಳಕರವಾದ ನಿನ್ನ ಸೂಕ್ಷ್ಮವು ಭಾವಿಸಲು ವಿಷಯವಾಗಿರುವುದು ||

ಉತ್ತರೋತ್ತರ ದಶಗುಣಾಧಿಕವಾಗಿರುವ ಗಂಧ ರಸ ರೂಪ ಸ್ಪರ್ಶ ತನ್ಮಾ ತ್ರಾಹಂಕಾರ ಮಹತ್ತೆಂಬ ಏಳು ತತ್ವಗಳಿಂದ ಕೂಡಿರುವ ನೀನು ವಿರಾಟ್ಪುರುಷನು. ಕುಂಡಲಿಗಾಶ್ರಯವಾದ ನಾಭಿಕಂದಕ್ಕಾಶ್ರಯವಾಗಿರುವುದರಿಂದ ಬ್ರಂಡಕೋಶ ವೆನಿಸುವ ಸ್ಥೂಲವಾದ ನಿನ್ನ ದೇಹದಲ್ಲಿ ಮನದ ಧಾರಣೆಗಾಶ್ರಯನಾಗಿರುವನು ||

ಸಮಸ್ತವಾದ ಲೋಕವೂ ಒಂದಾಗಿ ಸೇರುವುದಕ್ಕೆ ಸ್ಥಾನವೇ ನೀನು,

ರಸಾತಲಂ ತೇ ಗುಲ್ಫೌತು ತಲಾತಲ ಮಿತೀರ್ಯತೇ |
ಜಾನುನೀ ಸುತಲಂ ರಾಮ ಊರೂ ತೇ ವಿತಲಂ ತಥಾ ||೩೫||

ಅತಲಂ ಚ ಮಹೀರಾಮ ಜಘನಂ ನಾಭಿಗಂನಭಃ |
ಉರಸ್ಥಲಂ ತೇ ಜ್ಯೋತೀಂಷಿ ಗ್ರೀವಾತೇ ಮಹ ಉಚ್ಯತೇ ||೩೬||

ವದನಂ ಜನಲೋಕ ಸ್ತೇ ತಪಸ್ತೇ ಶಂಖದೇಶಗಂ |
ಸತ್ಯಲೋಕೋ ರಘುಶ್ರೇಷ್ಠ ಶೀರ್ಷಣ್ಯಾ ಸ್ತೇ ಸದಾ ಪ್ರಭೋ ||೩೭||

ಇಂದ್ರಾದಯೋ ಲೋಕಪಾಲಾ ಬಾಹವ ಸ್ತೇ ದಿಶಃ ಶ್ರುತೀ |
ಅಶ್ವಿನೌ ನಾಸಿಕೇ ರಾಮ ವಕ್ತ್ರಂ ತೇಗ್ನಿ ರುದಾಹೃತಃ ||೩೮||

ಚಕ್ಷು ಸ್ತೇ ಸವಿತಾ ರಾಮ ಮನ ಶ್ಚಂದ್ರ ಉದಾಹೃತಃ |
ಭ್ರೂಭಂಗ ಏವ ಕಾಲ ಸ್ತೇ ಬುದ್ಧಿಸ್ತೇ ವಾಕ್ಪತಿ ರ್ಭವೇತ್ ||೩೯||

ರುದ್ರೋ ಹಂಕಾರರೂಪಸ್ತೇ ವಾಚ ಶ್ಛಂದಾಂಸಿ ತೇವ್ಯಯ |
ಯಮ ಸ್ತೇ ದಂಷ್ಟ್ರದೇಶಸ್ಥೋ ನಕ್ಷತ್ರಾಣಿ ದ್ವಿಜಾಲಯಃ ||೪೦||

---

ಲೋಕಗಳು ನಿನ್ನ ಅಂಗಗಳೆಂದು ಹೇಳಲ್ಪಡುವುದು, ಎಂತೆಂದರೆ— ಪಾತಾಳವೇ ನಿನ್ನ ಅಂಗಾಲು, ಮಹಾತಲವೇ ಹಿಮ್ಮಡಿಯು, ರಸಾತಲವೇ ಕಾಲಹರಡುಗಳು, ತಲಾತವೇ ಮಂಡಿಗಳು, ಸುತಲವೇ ತೊಡೆಗಳು, ವಿತಲವೇ ಒಳತೊಡೆಗಳು ||೩೫||

ಅತಲವೇ ಗುದಸ್ಥಾನವು, ಭೂಲೋಕವೇ ಕಿಬ್ಬೊಟ್ಟೆಯು, ಭುವರ್ಲೋಕವೇ ನಾಭಿಯ ಆಕಾಶವು, ಸುವರ್ಲೋಕವೇ ಅಗ್ನಿಸ್ಥಾನವು, ಮಹರ್ಲೋಕವೇ ಕಂಠವು ||

ಜನಲೋಕವೇ ನಿನ್ನ ಮೊಗವು, ತಪೋಲೋಕವು ನಿನ್ನ ಹಣೆಯಿಂದ ಕೂಡಿರುವುದು. ಎಲೈ ಪ್ರಭುವಾದ ರಘುಶ್ರೇಷ್ಠನೇ, ಸತ್ಯಲೋಕವು ನಿನ್ನ ತಲೆಯಲ್ಲಿರುವುದು ||೩೭||

ಇಂದ್ರ ಮೊದಲಾದ ಲೋಕಪಾಲಕರೇ ನಿನ್ನ ತೋಳುಗಳು, ದಿಕ್ಕುಗಳೇ ನಿನ್ನ ಕಿವಿಗಳು, ಎಲೈ ರಾಮನೇ, ನಿನ್ನ ನಾಸಿಕೆಯೋ ಅಶ್ವಿನೀದೇವತೆಗಳು, ನಿನ್ನ ವಕ್ತ್ರವೇ ಅಗ್ನಿಯೆಂದು ಹೇಳಲ್ಪಡುವುದು ||೩೮||

ಎಲೈ ಶ್ರೀರಾಮನೇ! ನಿನ್ನ ನೇತ್ರವೇ ಸೂರ್ಯನು, ಮನವೇ ಚಂದ್ರನು, ನಿನ್ನ ಹುಬ್ಬಿನ ಚಲನವೇ ಕಾಲಪುರುಷನು, ನಿನ್ನ ಬುದ್ಧಿಯೇ ಬೃಹಸ್ಪತಿಯು ||೩೯||

ಎಲೈ ನಾಶರಹಿತನೇ, ನಿನ್ನ ಅಹಂಕಾರಸ್ವರೂಪನಾದವನೇ ರುದ್ರನು, ನಿನ್ನ

ಹಾಸೋ ಮೋಹಕರೀ ಮಾಯಾ ಸೃಷ್ಟಿಸ್ತೆ ಪಾಂಗಮೋಕ್ಷಣಂ |
ಧರ್ಮಃ ಪುರಸ್ತೆ ಧರ್ಮಶ್ಚ ಪೃಷ್ಠಭಾಗ ಉದೀರಿತಃ ||೪೧||

ನಿಮಿಷೋ ನ್ಮೇಷಣೇ ರಾತ್ರಿ ರ್ದಿವಾಚೈವ ರಘೂತ್ತಮ |
ಸಮುದ್ರಾ ಸ್ಸಪ್ತತೆ ಕುಕ್ಷಿ ರ್ನಾಡ್ಯೋ ನದ್ಯ ಸ್ತವ ಪ್ರಭೋ ||೪೨||

ರೋಮಾಣಿ ವೃಕ್ಷೌಷಧಯೋ ರೇತೋ ವೃಷ್ಟಿ ಸ್ತವ ಪ್ರಭೋ|
ಮಹಿಮಾ ಜ್ಞಾನಶಕ್ತಿಸ್ತ ಏವಂ ಸ್ಥೂಲವಪು ಸ್ತವ ||೪೩||

ಯದಸ್ಮಿಂ ಸ್ಥೂಲರೂಪೆ ತೇ ಮನ ಸ್ಸಂಧಾರ್ಯತೆ ನರೈಃ |
ಅನಾಯಾಸೇನ ಮುಕ್ತಿಸ್ಸ್ಯಾ ದತೋ ನ್ಯನ್ನೈವ ಕಿಂಚನ ||೪೪||

ಅತೋಹಂ ರಾಮರೂಪಂ ತೇ ಸ್ಥೂಲ ಮೇವಾ ನುಭಾವಯೆ |
ಯಸ್ಮಿ ನ್ಧ್ಯಾತೆ ಪ್ರೇಮರಸ ಸ್ಸರೋಮಪುಲಕೋ ಭವೇತ್ ||೪೫||

---

ವಾಕ್ಕುಗಳೇ ವೇದಗಳು, ಯಮನು ನಿನ್ನ ಕೋರೆದಾಡೆಯಲ್ಲಿರುವನು, ನಕ್ಷತ್ರಗಳು ನಿನ್ನ ಹಲ್ಲಿನಸಾಲುಗಳು ||೪೦||

ನಿನ್ನ ನಗುವೇ ಜನಗಳಿಗೆ ಮೋಹವನ್ನುಂಟುಮಾಡುವ ಮಾಯೆಯು, ನಿನ್ನ ಕಡೆಗಣ್ಣನೋಟವು ಸೃಷ್ಟಿಯು, ಧರ್ಮವೇ ನಿನ್ನ ಶರೀರದ ಮುಂಭಾಗವು, ಅಧರ್ಮವು ಹಿಂಭಾಗವು ||೪೧||

ಎಲೈ ರಘುಶ್ರೇಷ್ಠನಾದ ಪ್ರಭುವೇ! ನಿನ್ನ ಕಣ್ಣುಮುಚ್ಚೋಣವೇ ರಾತ್ರಿಯು, ತೆರೆಯೋಣವೇ ಹಗಲು, ನಿನ್ನ ಕುಕ್ಷಿಯೇ ಸಮುದ್ರಗಳು, ನಾಡಿಗಳೇ ನದಿಗಳು ||೪೨||

ಎಲೈ ಪ್ರಭುವೇ, ನಿನ್ನ ಮೈಕೂದಲು ಮರಗಿಡಗಳು, ನಿನ್ನ ರೇತಸ್ಸೇ ಮಳೆಗಳು, ಜ್ಞಾನಶಕ್ತಿಯೇ ನಿನ್ನ ಮಹಿಮೆಯು, ಈಪ್ರಕಾರವಾಗಿ ನಿನ್ನ ಸ್ಥೂಲಶರೀರವು ಹೇಳಲ್ಪಡುವುದು ||೪೩||

ಈ ನಿನ್ನ ಸ್ಥೂಲಶರೀರದಲ್ಲಿ ಮನುಷ್ಯನು ಮನಸ್ಸನ್ನು ನಿಲ್ಲಿಸಲ್ಪಟ್ಟರೆ ಇದಕ್ಕೆ ಭಿನ್ನವಾಗಿ ಯಾವುದೂ ಇಲ್ಲದಿರುವುದರಿಂದಲೇ ಆಯಾಸವಿಲ್ಲದೇನೇ ಮುಕ್ತಿಯಾಗುವುದೆಂದು ಅರ್ಥ. ಗೋಚರವಾದುದೆಲ್ಲವನ್ನೂ ನೀನೆಂದು ತಿಳಿಯಬೇಕೆಂದು ತಾತ್ಪರ್ಯ ||೪೪||

ಎಲೈ ರಾಮನೇ, ಆದುದರಿಂದ ಯಾವುದನ್ನು ಧ್ಯಾನಿಸುವುದರಿಂದ ರೋ

ತದೈವ ಮುಕ್ತಿಸ್ಸ್ಯಾದ್ರಾಮ ಯದಾ ತೇ ಸ್ಥೂಲಭಾವಕಃ |
ತದಪ್ಯಾಸ್ತಾಂ ತವೈವಾಹ ಮೇತದ್ರೂಪಂ ವಿಚಿಂತಯೆ ||೪೬||

ಧನುರ್ಬಾಣಧರಂ ಶ್ಯಾಮಂ ಜಟಾವಲ್ಕಲಭೂಷಿತಂ |
ಅಪೀಚ್ಯವಯಸಂ ಸೀತಾಂ ವಿಚಿನ್ವಂತಂ ಸಲಕ್ಷ್ಮಣಂ |
ಇದ ಮೇವ ಸದಾ ಮೆ ಸ್ಯಾ ನ್ಮಾನಸೆ ರಘುನಂದನ ||೪೭||

ಸರ್ವಜ್ಞಃ ಶಂಕರ ಸ್ಸಾಕ್ಷಾ ತ್ಪಾರ್ವತ್ಯಾ ಸಹಿತ ಸ್ಸದಾ |
ತ್ವದ್ರೂಪಮೇವ ಸತತಂ ಧ್ಯಾಯನ್ನಾಸ್ತೆ ರಘೂತ್ತಮ ||೪೮||

ಮುಮೂರ್ಷೂಣಾಂ ಸದಾ ಕಾಶ್ಯಾಂ ತಾರಕಂ ಬ್ರಹ್ಮವಾಚಕಂ |
ರಾಮರಾಮೇತ್ಯುಪದಿಶೇ ತ್ಸದಾ ಸಂತುಷ್ಟಮಾನಸಃ ||೪೯||

---

ಮಾಂಚದಿಂದ ಕೂಡಿದ ಪ್ರೇಮರಸವು ಉದಿಸುವುದೋ ಆ ನಿನ್ನ ಸ್ಥೂಲರೂಪವನ್ನೇ ಸಮ್ಮಾನಿಸುವೆನು. ಅಲ್ಲಿ ಆತ್ಮನೆನ್ನುವುದರಿಂದ ಪ್ರೇಮವು ಮಹಿಮೆಯ ನೋಟದಿಂದ ರೋಮಾಂಚವು ಉದಿಸುವುದೆಂದು ತಾತ್ಪರ್ಯ ||೪೫||

ಎಲೈ ರಾಮನೇ, ಮನುಷ್ಯನು ಯಾವಾಗ ನಿನ್ನ ಸ್ಥೂಲರೂಪವನ್ನು ಭಾವಿಸುವನೋ ಆಗಲೇ ಮುಕ್ತಿಯಾಗುವುದು. ಅದು ಹಾಗಿರಲಿ, ನಾನು ನಿನ್ನ ರೂಪವನ್ನೇ ಧ್ಯಾನಿಸುವೆನು ||೪೬||

ಅದಾವುದೆಂದರೆ—ಎಲೈ ರಘುನಂದನನೇ, ಧನುರ್ಬಾಣಗಳನ್ನು ಧರಿಸಿದವನಾಗಿಯೂ, ಜಟಾವಲ್ಕಲಗಳಿಂದ ಅಲಂಕೃತನಾಗಿಯೂ, ಮನೋಹರವಾದ ವಯಸ್ಸುಳ್ಳವನಾಗಿಯೂ ಹಸುರುಬಣ್ಣವುಳ್ಳವನಾಗಿಯೂ, ಲಕ್ಷ್ಮಣಸಹಿತನಾಗಿಯೂ ಇರುವ ನಿನ್ನನ್ನೇ ನಾನು ನೋಡುವೆನು. ಆ ನಿನ್ನ ರೂಪವೇ ನನ್ನ ಮನಸ್ಸಿನಲ್ಲಿ ಸರ್ವದಾ ಇರಲಿ ||೪೭||

ಎಲೈ ರಘೂತ್ತಮನೇ! ಸರ್ವಜ್ಞನಾದ ಪರಮೇಶ್ವರನೂ ಕೂಡ ಪಾರ್ವತಿಯೊಡನೆ ಸರ್ವದಾ ಕೂಡಿರುವನಾದರೂ ಈ ನಿನ್ನ ರೂಪವನ್ನೇ ಸರ್ವದಾ ಧ್ಯಾನಿಸುತ್ತಿರುವನು ||೪೮||

ಮತ್ತೆ ಈಶ್ವರನು ಸರ್ವದಾ ಕಾಶಿಯಲ್ಲಿ ಸಾಯುತಕ್ಕವರಿಗೆ ಬ್ರಹ್ಮಪ್ರತಿಪಾದಕವಾದ ರಾಮ ರಾಮ ಎಂದು ಸಂಸಾರಕ್ಕೆ ತಾರಕವಾದ ಮಂತ್ರವನ್ನು ಉಪದೇಶಿಸುತ್ತಾ ನಿತ್ಯಸಂತುಷ್ಟವಾದ ಮನಸ್ಸುಳ್ಳವನಾಗಿರುವನು ||೪೯||

ಅತಸ್ತ್ವಂ ಜಾನಕೀ ನಾಥ ಪರಮಾತ್ಮಾ ಸುನಿಶ್ಚಿತಃ |
ಸರ್ವೇ ತೇ ಮಾಯಯಾ ಮೂಢಾ ಸ್ತ್ವಾಂ ನಜಾನಂತಿ ತತ್ವತಃ ||೫೦||

ನಮಸ್ತೇ ರಾಮಭದ್ರಾಯ ವೇಧಸೆ ಪರಮಾತ್ಮನೆ |
ಅಯೋಧ್ಯಾಧಿಪತೆ ತುಭ್ಯಂ ನಮ ಸ್ಸೌಮಿತ್ರಿಸೇವಿತ |
ತ್ರಾಹಿ ತ್ರಾಹಿ ಜಗನ್ನಾಥ ಮಾಂ ಮಾಯಾನಾವೃಣೋತು ತೆ ||೫೧||

ಶ್ರೀರಾಮಃ ||
ತುಷ್ಟೋಽಹಂ ದೇವಗಂಧರ್ವ ಭಕ್ತ್ಯಾ ಸ್ತುತ್ಯಾ ಚ ತೆ ನಘ |
ಯಾಹಿ ಮೆ ಪರಮಸ್ಥಾನಂ ಯೋಗಿಗಮ್ಯಂ ಸನಾತನಂ ||೫೨||

ಜಪಂತಿ ಯೆ ನಿತ್ಯ ಮನನ್ಯಬುಧ್ಯಾಭಕ್ತ್ಯಾ ತ್ವದುಕ್ತಂ ಸ್ತವ ಮಾಗಮೋಕ್ತಂ|
ತೇ ಜ್ಞಾನ ಸಂಭೂತಭವಂ ವಿಹಾಯ ಮಾಂ ಯಾಂತಿ ನಿತ್ಯಾನುಭವಾನುಮೇಯಂ||

|| ನವಮಸ್ಸರ್ಗ ಸಮಾಪ್ತಃ ||

---

ಆದುದರಿಂದ ಎಲೈ ಜಾನಕೀಪತಿಯೇ, ನೀನು ಶಾಸ್ತ್ರವಿಚಾರಂಗಳಿಂದ ಚನ್ನಾಗಿ ನಿಶ್ಚಯಿಸಲ್ಪಟ್ಟ ಪರಮಾತ್ಮನು. ನಿನ್ನ ಮಾಯೆಯಿಂದ ಮೂಢರಾದ ಜನಗಳೆಲ್ಲರೂ ನಿನ್ನನ್ನು ಯಥಾರ್ಥವಾಗಿ ತಿಳಿಯಲಾರರೆಂದು ಅರ್ಥ. ಗೋಚರಿಸುವ ಪದಾರ್ಥವನ್ನು ನಿನಗಭಿನ್ನವಾದುದನ್ನಾಗಿ ತಿಳಿಯುವುದೆಂದು ತಾತ್ಪರ್ಯ ||೫೦||

ದುಷ್ಟರಿಗೆ ನಾಶಕನಾಗಿಯೂ, ಶಿಷ್ಟರಿಗೆ ಮಂಗಳಕರನಾಗಿಯೂ ಇರುವ ರಾಮಭದ್ರನಾದ ನಿನಗೆ ನಮಸ್ಕಾರವು. ಸರ್ವಕ್ಕೂ ಮಾಡುವನಾದ್ದರಿಂದ ವೇಧಾ ಎಂದು ಪ್ರಖ್ಯಾತನಾದ ನಿನಗೆ ನಮಸ್ಕಾರವು. ಎಲೈ ಅಯೊಧ್ಯಾಪತಿಯೇ ನಿನಗೆ ನಮಸ್ಕಾರವು, ಎಲೈ ಜಗದೀಶ್ವರನೇ, ಲಕ್ಷ್ಮಣನಿಂದ ಸೇವಿತನಾದ ನೀನು ನನ್ನನ್ನು ಬಾರಿಬಾರಿಗೂ ರಕ್ಷಿಸು. ನನ್ನನ್ನು ನಿನ್ನ ಮಾಯೆಯಿಂದ ಆಕ್ರಮಿಸಬೇಡ ||೫೧||

ಎಂದು ಆ ಗಂಧರ್ವನು ಪ್ರಾರ್ಥಿಸಲು, ಶ್ರೀರಾಮನು–ಎಲೈ ನಿರ್ದೋಷನಾದ ದೇವಗಂಧರ್ವನೇ, ನಿನ್ನ ಭಕ್ತಿಯಿಂದಲೂ, ಸ್ತುತಿಯಿಂದಲೂ ನಾನು ಸಂತುಷ್ಟನಾದೆನು. ಯೋಗಿಗಳಿಗೆ ಹೊಂದಲು ಯೋಗ್ಯವಾದ ನಿತ್ಯವಾದಂಥಾ ಉತ್ತಮವಾದ ನನ್ನ ಸ್ಥಾನವಾದ ವೈಕುಂಠವನ್ನು ನೀನು ಹೊಂದುವನಾಗು ||೫೨||

ಭಕ್ತಿಯಿಂದ ನಿನ್ನಿಂದ ಹೇಳಲ್ಪಟ್ಟ ಶಾಸ್ತ್ರಪ್ರಸಿದ್ಧವಾದ ಅರ್ಥವುಳ್ಳ ಈ ಸ್ತೋತ್ರವನ್ನು ಅಭೇದಬುದ್ಧಿಯಿಂದ ಯಾರು ಪ್ರತಿದಿನದಲ್ಲೂ ಜಪಿಸುವರೋ ಅವರು ಅಜ್ಞಾನದಿಂದುಂಟಾದ ಸಂಸಾರವನ್ನು ಬಿಟ್ಟು ಸರ್ವಕಾಲದಲ್ಲೂ ಅನುಭವಾನುಸಾರ ತಿಳಿಯಲು ಶಕ್ಯನಾದ ನನ್ನನ್ನು ಹೊಂದುವರು ||೫೩||

|| ಇಲ್ಲಿಗೆ ಒಂಭತ್ತನೇ ಸರ್ಗವು ಮುಗಿದುದು ||



# ದಶಮಸ್ಸರ್ಗಃ.

ಶ್ರೀ ಮಹಾದೇವಃ ||

ಲಬ್ಧ್ವಾ ವರಂ ಸಗಂಧರ್ವಃ ಪ್ರಯಾಸ್ಯನ್ ರಾಮ ಮಬ್ರವೀತ್ |
ಶಬರ್ಯಾ ಸ್ತೆ ಪುರೋಭಾಗೆ ಆಶ್ರಮೆ ರಘುನಂದನ ||೧||

ಭಕ್ತ್ಯಾ ತ್ವತ್ಪಾದಕಮಲೆ ಭಕ್ತಿಮಾರ್ಗವಿಶಾರದಾ |
ತಾಂ ಪ್ರಯಾಹಿ ಮಹಾಭಾಗ ಸರ್ವಂ ತೆ ಕಥಯಿಷ್ಯತಿ ||೨||

ಇತ್ಯುಕ್ತ್ವಾ ಪ್ರಯಯೌ ಸೋಪಿ ವಿಮಾನೇನಾರ್ಕವರ್ಚಸಾ |
ವಿಷ್ಣೋಃ ಪದಂ ರಾಮನಾಮ ಸ್ಮರಣೆ ಫಲಮೀದೃಶಂ ||೩||

ತ್ಯಕ್ತ್ವಾ ತದ್ವಿಪಿನಂ ಘೋರಂ ಸಿಂಹವ್ಯಾಘ್ರಾದಿದೂಷಿತಂ |
ಶನೈ ರಥಾಶ್ರಮಪದಂ ಶಬರ್ಯಾ ರಘುನಂದನಃ ||೪||

---

ಶ್ರೀ ಪಾರ್ವತಿಯನ್ನು ಕುರಿತು ಪರಮೇಶ್ವರನು ಹೇಳುವನು ||

ಆ ಗಂಧರ್ವನು ಶ್ರೀರಾಮನಿಂದ ವರವನ್ನು ಪಡೆದು ಹೋಗುತ್ತಾ ರಾಮನನ್ನು ಕುರಿತು ಹೇಳುವನು—ಎಲೈ ರಘುನಂದನನೇ, ಮುಂದುಗಡೆಯಲ್ಲಿ ಕಾಣುತ್ತಿರುವ ಆಶ್ರಮದಲ್ಲಿ ಶಬರಿಯು ಇರುವಳು ||೧||

ಎಲೈ ಮಹಾ ಭಾಗ್ಯವಂತನೇ, ನಿನ್ನ ಪಾದಪದ್ಮದಲ್ಲಿ ಭಕ್ತಿಯಿಂದ ಭಕ್ತಿಮಾರ್ಗದಲ್ಲಿ ಪಂಡಿತಳಾದ ಆ ಶಬರಿಯನ್ನು ನೀನು ಹೊಂದುವನಾಗು. ಅವಳು ಸರ್ವವನ್ನೂ ನಿನಗೆ ಹೇಳುವಳು ||೨||

ಎಂದು ಹೇಳಿ ಆ ಗಂಧರ್ವನು ಸೂರ್ಯನಂತೆ ತೇಜಸ್ಸುಳ್ಳ ವಿಮಾನದಲ್ಲಿ ಕುಳಿತು, ವಿಷ್ಣುವಿನ ಸ್ಥಾನವಾದ ವೈಕುಂಠವನ್ನು ಸೇರಿದನು. ಶ್ರೀರಾಮನ ನಾಮಸ್ಮರಣೆಯಲ್ಲಿ ಫಲವು ಇಂಥಾದ್ದಿರುವುದರಿಂದ ಇದನ್ನೇ ಜಪಿಸುತ್ತಿರಬೇಕೆಂದು ತಾತ್ಪರ್ಯ ||೩||

ಬಳಿಕ ಶ್ರೀರಾಮನು ಸಿಂಹ ವ್ಯಾಘ್ರಾದಿಗಳಿಂದ ವಾಸಯೋಗ್ಯವಲ್ಲವೆಂದು

ಶಬರೀ ರಾಮ ಮಾಲೋಕ್ಯ ಲಕ್ಷ್ಮಣೇನ ಸಮನ್ವಿತಂ |
ಆಯಾಂತ ಮಾರಾ ದ್ದರ್ಶೇಣ ಪ್ರತ್ಯುತ್ಥಾಯಾ ಚಿರೇಣಸಾ ||೫||

ಪತಿತ್ವಾ ಪಾದಯೋ ರಗ್ರೇ ಹರ್ಷಪೂರ್ಣಾಶ್ರುಲೋಚನಾ |
ಸ್ವಾಗತೇ ನಾಭಿನಂದ್ಯಾಥ ಸ್ವಾಸನೇ ಸನ್ಯವೇಶಯತ್ ||೬||

ರಾಮಲಕ್ಷ್ಮಣಯೋ ಸ್ಸಮ್ಯಕ್ಪಾದೌ ಪ್ರಕ್ಷಾಳ್ಯಭಕ್ತಿತಃ |
ತಜ್ಜಲೇನಾ ಭಿಷಿಚ್ಯಾಂಗ ಮಥಾರ್ಘ್ಯಾದಿಭಿ ರಾದೃತಾ ||೭||

ಸಂಪೂಜ್ಯ ವಿಧಿವದ್ರಾಮಂ ಸಸೌಮಿತ್ರಿಂ ಸಪರ್ಯಯಾ |
ಸಂಗೃಹೀತಾನಿ ದಿವ್ಯಾನಿ ರಾಮಾರ್ಥಂ ಶಬರೀ ಮುದಾ |
ಫಲಾ ನ್ಯಮೃತಕಲ್ಪಾನಿ ದದೌ ರಾಮಾಯ ಭಕ್ತಿತಃ ||೮||

ಪಾದೌ ಸಂಪೂಜ್ಯ ಕುಸುಮೈ ಸ್ಸುಗಂಧೈ ಸ್ಸಾನುಲೇಪನೈಃ |
ಕೃತಾತಿಥ್ಯಂ ರಘುಶ್ರೇಷ್ಠ ಮುಪವಿಷ್ಟಂ ಸಹಾನುಜಂ |
ಶಬರೀ ಭಕ್ತಿಸಂಪನ್ನಾ ಪ್ರಾಂಜಲಿರ್ವಾಕ್ಯ ಮಬ್ರವೀತ್ ||೯||

---

ನಿಂದಿತವಾದ ಭಯಂಕರವಾದ ಆ ವನವನ್ನು ಬಿಟ್ಟು ಮೆಲ್ಲನೆ ಶಬರಿಯು ಆಶ್ರಮ ಸ್ಥಾನವನ್ನು ಸೇರಿದನು ||೪||

ಲಕ್ಷ್ಮಣನೊಡನೆ ಕೂಡಿ ಬರುತ್ತಿರುವ ಆ ರಾಮನನ್ನು ಸಮೀಪದಲ್ಲೇ ಕಂಡು ಶಬರಿಯು ಸಂತೋಷದಿಂದ ಜಾಗ್ರತೆಯಾಗಿ ಎದ್ದು ||೫||

ಪಾದದ ಮುಂದುಗಡೆಯಲ್ಲಿ ಬಿದ್ದು ಆನಂದಭಾಷ್ಪಗಳಿಂದ ಕೂಡಿದ ನೇತ್ರ ವುಳ್ಳವಳಾಗಿ ಸುಖವಾಗಿ ಬರೋಣವಾಯಿತೇ ? ಎಂಬ ಪ್ರಶ್ನೆಯಿಂದ ಸಂತೋಷ ಪಡಿಸಿ ಶುಭವಾದ ಆಸನದಲ್ಲಿ ಕುಳ್ಳಿರಿಸಿದಳು ||೬||

ಭಕ್ತಿಯಿಂದ ಆ ರಾಮಲಕ್ಷ್ಮಣರ ಪಾದಗಳನ್ನು ಚೆನ್ನಾಗಿ ತೊಳೆದು ಆ ನೀರಿನಿಂದ ಶರೀರವನ್ನು ನೆನಸಿಕೊಂಡು ಬಳಿಕ ಆದರದಿಂದ ಕೂಡಿದವಳಾಗಿ ಅರ್ಘ್ಯಾದಿಗಳಿಂದ ||೭||

ಯಥಾವಿಧಿಯಾಗಿ ಲಕ್ಷ್ಮಣಸಹಿತನಾದ ಶ್ರೀರಾಮನನ್ನು ಪೂಜಿಸಿ ಸಂತೋ ಷದಿಂದ ಆ ಶಬರಿಯು ರಾಮನಿಗೋಸ್ಕರವೆಂದು ಗ್ರಹಿಸಲ್ಪಟ್ಟ ಅಮೃತಕ್ಕೆ ಸರಿ ಯಾದ ರುಚಿಯುಳ್ಳ ದಿವ್ಯವಾದ ಫಲಗಳನ್ನು ಶ್ರೀರಾಮನಿಗೆ ಒಪ್ಪಿಸಿದಳು ||೮||

ಸುವಾಸನೆಯಿಂದ ಕೂಡಿದ ಪುಷ್ಪಗಳಿಂದ ಪಾದಗಳನ್ನು ಪೂಜಿಸಿ, ಗ್ರಹಿಸಿದ

ಅತ್ರಾಶ್ರಮೆ ರಘುಶ್ರೇಷ್ಠ ಗುರವೋ ಮೆ ಮಹರ್ಷಯಃ |
ಸ್ಥಿತಾಃ ಶುಶ್ರೂಷಣಂ ತೇಷಾಂ ಕುರ್ವಂತೀ ಸಮುಪಸ್ಥಿತಾ |
ಬಹುವರ್ಷಸಹಸ್ರಾಣಿ ಗತಾ ಸ್ತೆ ಬ್ರಹ್ಮಣಃ ಪದಂ ||೧೦||

ಗಮಿಷ್ಯಂತೊ ಬ್ರುವ ನ್ಮಾಂ ತ್ವಂ ವಸಾ ತ್ರೈವ ಸಮಾಹಿತಾ |
ರಾಮೊ ದಾಶರಥಿ ರ್ಜಾತಃ ಪರಮಾತ್ಮಾ ಸನಾತನಃ ||೧೧||

ರಾಕ್ಷಸಾನಾಂ ವಧಾರ್ಥಾಯ ಋಷೀಣಾಂ ರಕ್ಷಣಾಯ ಚ |
ಆಗಮಿಷ್ಯತಿ ಚೈಕಾಗ್ರಧ್ಯಾನನಿಷ್ಠಾ ಸ್ಥಿರಾ ಭವ ||೧೨||

ಇದಾನೀಂ ಚಿತ್ರಕೂಟಾದ್ರಾ ವಾಶ್ರಮೆ ವಸತಿ ಪ್ರಭುಃ ||
ಯಾವದಾಗಮನಂ ತಸ್ಯ ತಾವದ್ರಕ್ಷ ಕಳೇಬರಂ |
ದೃಷ್ಟ್ವೈವ ರಾಘವಂ ದಗ್ಧ್ವಾ ದೇಹಂ ಯಾಸ್ಯಸಿ ತತ್ಪದಂ ||೧೩||

---

ಆಹಾರವುಳ್ಳವನಾಗಿ ಲಕ್ಷ್ಮಣನೊಡನೆ ಕುಳಿತಿರುವ ರಘುಶ್ರೇಷ್ಠನನ್ನು ಕುರಿತು— ಭಕ್ತಿಯಿಂದ ಕೂಡಿದ ಶಬರಿಯು ಕೃತಾಂಜಲಿಯಾಗಿ ಮಾತನಾಡಿದಳು ||೯||

ಎಲೈ ಶ್ರೀರಾಮನೇ! ಈ ಆಶ್ರಮದಲ್ಲಿ ನನಗೆ ಗುರುಗಳಾದ ಮಹರ್ಷಿಗಳಿದ್ದರು. ಅನೇಕಸಹಸ್ರವರ್ಷಗಳು ಅವರ ಸೇವೆಯನ್ನು ನಾನು ಮಾಡುತ್ತಿದ್ದೆನು. ಅವರು ಬ್ರಹ್ಮಲೋಕವನ್ನು ಸೇರಿದರು ||೧೦||

ಹೋಗುತ್ತಿರುವ ಅವರು ನನ್ನನ್ನು ಕುರಿತು ಈರೀತಿಯಾಗಿ ಹೇಳಿದರು— ನೀನು ಇಲ್ಲಿಯೇ ಏಕಾಗ್ರಚಿತ್ತಳಾಗಿ ಇರುವಳಾಗು. ನಿತ್ಯನಾದ ಪರಮಾತ್ಮನು ದಶರಥಪುತ್ರನಾದ ರಾಮನೆಂದು ಹುಟ್ಟಿರುವನು ||೧೧||

ಆತನು ರಾಕ್ಷಸರ ವಧೆಗೋಸುಗವೂ, ಋಷಿಗಳ ರಕ್ಷಣೆಗೋಸುಗವೂ ಬರುವನು, ಅದುಪರಿಯಂತರವೂ ಧ್ಯಾನಾಸಕ್ತಳಾಗಿರು, ಎಂದು ಹೇಳಿದರು. ಅವರ ಮಾತಿನಂತೆಯೇ ಎಲೈ ಶ್ರೀರಾಮನೇ! ನಿನ್ನ ಧ್ಯಾನವೇ ಮುಖ್ಯಳಾಗಿ ನಿನ್ನ ಆಗಮನವನ್ನೇ ಕಾದುಕೊಂಡಿದ್ದೆನು. ಈಗ ಗುರುಗಳ ಮಾತು ಸಾರ್ಥಕವಾಯಿತು ||

ಎಲೈ ಶ್ರೀರಾಮನೇ! ನಿನ್ನ ದರ್ಶನವು ನಮ್ಮ ಗುರುಗಳಿಗೂ ಕೂಡ ಲಭಿಸಲಿಲ್ಲ. ತಿಳಿಯಲಶಕ್ಯವಾದ ಸ್ವರೂಪವುಳ್ಳವನೇ! ನಾನು ನೀಚಜಾತಿಯಲ್ಲಿ ಹುಟ್ಟಿದ ಮೂಢಳಾದ ಸ್ತ್ರೀಯು ||೧೩||

ತಥೈವಾಕರವಂ ರಾಮ ತ್ವದ್ಧ್ಯಾನೈಕಪರಾಯಣಾ |
ಪ್ರತೀಕ್ಷ್ಯೈ ಗಮನಂ ತೇ ದ್ಯ ಸಫಲಂ ಗುರುಭಾಷಿತಂ ||೧೪||

ತವ ಸಂದರ್ಶನಂ ರಾಮ ಗುರೂಣಾ ಮಪಿ ಮೇ ನಹಿ |
ಯೋಷಿನ್ಮೂಢಾ ಪ್ರಮೇಯಾತ್ಮ ನ್ಹೀನಜಾತಿ ಸಮುದ್ಭವಾ ||೧೫||

ತವ ದಾಸಸ್ಯ ದಾಸಾನಾಂ ಶತಸಂಖ್ಯೋತ್ತರಸ್ಯ ವಾ |
ದಾಸೀತ್ವೇನಾಧಿಕಾರೋಸ್ತಿ ಕುತಸ್ಸಾಕ್ಷಾತ್ತ ವೈವಹಿ ||೧೬||

ಕಥಂ ರಾಮಾದ್ಯ ಮೇದೃಷ್ಟ ಸ್ತ್ವಂ ಮನೋವಾಗಗೋಚರಃ |
ಸ್ತೋತುಂ ನಜಾನೇ ದೇವೇಶ ಕಿಂ ಕರೋಮಿ ಪ್ರಸೀದಮೆ ||೧೭||

ಶ್ರೀರಾಮಃ ||

ಪುಂಸ್ತ್ವೇ ಸ್ತ್ರೀತ್ವೇ ವಿಶೇಷೊ ವಾ ಜಾತಿವರ್ಣಾಶ್ರಮಾದಯಃ |
ನ ಕಾರಣಂ ಮದ್ಭಜನೆ ಭಕ್ತಿರೇವ ಹಿ ಕಾರಣಂ ||೧೮||

ಯಜ್ಞದಾನತಪೋಭಿ ರ್ವಾ ವೇದಾಧ್ಯಯನ ಕರ್ಮಭಿಃ |
ನೈವ ದೃಷ್ಟು ಮಹಂ ಶಕ್ಯೊ ಮದ್ಭಕ್ತಿ ವಿಮುಖೈ ಸ್ಸದಾ ||೧೯||

---

ನಿನ್ನ ದಾಸನಿಗೆ ದಾಸರೆಂದು ನೂರಾರು ಲೆಕ್ಕಗಳಿಗೆ ಕೊನೆಯಲ್ಲಿರುವವನ ದಾಸಿಯಾಗುವುದಕ್ಕೂ ನನಗೆ ಯೋಗ್ಯತೆಯಿಲ್ಲ. ಹೀಗಿರುವಲ್ಲಿ ಪ್ರತ್ಯಕ್ಷವಾಗಿ ನಿನಗೆ ದಾಸಿಯೆನ್ನುವುದು ಹೇಗಾದೀತು ||೧೬||

ಎಲೈ ಶ್ರೀರಾಮನೇ ! ಮನಸ್ಸಿಗೂ, ವಾಕ್ಕಿಗೂ, ಗೋಚರನಾಗದ ನೀನು ಈಗ ಹೇಗೆ ನನಗೆ ಕಾಣಲ್ಪಟ್ಟೆಯೋ ತಿಳಿಯಲಿಲ್ಲ. ದೇವತೆಗಳಿಗೂ ಈಶ್ವರನಾದವನೆ ! ನಿನ್ನನ್ನು ನಾನು ಸ್ತುತಿಸಲರಿಯೆನು. ನೀನೇ ನನಗೆ ಪ್ರಸನ್ನನಾಗು ||೧೭||

ಎಂದು ಹೇಳಲು, ಶ್ರೀರಾಮನು ಗಂಡಸುತನದಲ್ಲೂ, ಹೆಂಗಸುತನದಲ್ಲೂ ಜಾತಿವರ್ಣಾಶ್ರಮಾದಿಗಳು ನನ್ನನ್ನು ಭಜಿಸುವುದರಲ್ಲಿ ಭಕ್ತಿಯೇ ಮುಖ್ಯವಾದ ಕಾರಣವು ||೧೮||

ಫಲಾಪೇಕ್ಷೆಯಿಲ್ಲದೆ ನನ್ನಲ್ಲುಂಟಾಗುವ ಪ್ರೀತಿಯೇ ಭಕ್ತಿಯೆಂದು ತಿಳಿಯತಕ್ಕದು. ನನ್ನ ಭಕ್ತಿಯಲ್ಲಿ ಪರಾಙ್ಮುಖರಾದವರಿಂದ ಸರ್ವದಾ ಮಾಡಲ್ಪಡುವ ಯಜ್ಞ, ದಾನ, ತಪಸ್ಸುಗಳಿಂದಲೂ, ವೇದಾಧ್ಯಯನಾದಿ ಕರ್ಮಗಳಿಂದಲೂ, ನಾನು ನೋಡಲು ಶಕ್ಯನಾಗುವುದಿಲ್ಲ ||೧೯||

ತಸ್ಮಾದ್ಭಾಮಿನಿ ಸಂಕ್ಷೇಪಾ ದ್ವಕ್ಷ್ಯೇಹಂ ಭಕ್ತಿಸಾಧನಂ |
ಸತಾಂ ಸಂಗತಿರೇವಾತ್ರ ಪ್ರಥಮಂ ಸಾಧನಂ ಸ್ಮೃತಂ ||೨೦||

ದ್ವಿತೀಯಂ ಮತ್ಕಥಾಲಾಪ ಸ್ತೃತೀಯಂ ಮದ್ಗುಣೇರಣಂ |
ವ್ಯಾಖ್ಯಾತೃತ್ವಂ ಮದ್ವಚಸಾಂ ಚತುರ್ಥಂ ಸಾಧನಂ ಭವೇತ್ ||೨೧||

ಆಚಾರ್ಯೋಪಾಸನಂ ಭದ್ರೇ ಮದ್ಬುಧ್ಯಾ ಮಾಯಯಾ ಸದಾ |
ಪಂಚಮಂ ಪುಣ್ಯಶೀಲತ್ವಂ ಯಮಾದಿನಿಯಮಾದಿ ಚ ||೨೨||

ನಿಷ್ಠಾ ಮತ್ಪೂಜನೇ ನಿತ್ಯಂ ಷಷ್ಠಂ ಸಾಧನಮೀರಿತಂ |
ಮಮ ಮಂತ್ರೋಪಾಸಕತ್ವಂ ಸಾಂಗಂ ಸಪ್ತಮ ಮುಚ್ಯತೆ ||೨೩||

---

ಎಲೌ ಬುದ್ಧಿಸಂಪತ್ತುಗಳಿಂದ ಕೂಡಿದ ಶಬರಿಯೇ! ಆದ್ದರಿಂದ ನನ್ನ ಭಕ್ತಿಗೆ ಸಾಧನವಾದದ್ದನ್ನು ಸಂಕ್ಷೇಪವಾಗಿ ಹೇಳುವೆನು. ಈ ಭಕ್ತಿಯ ವಿಷಯದಲ್ಲಿ ಸಜ್ಜನರ ಸಂಗವೇ ಮೊದಲನೇ ಸಾಧನವೆಂದು ಸ್ಮೃತಿಗಳಲ್ಲಿ ಹೇಳಲ್ಪಡುವುದು ||

ಆಸ್ತೀತಿಸತ್ತೆಂಬ ವಿಗ್ರಹದಿಂದೆಂದಿಗೂ ನಾಶವಿಲ್ಲದೆ ಸತ್ತೆನಿಸುವ ಪರಮಾತ್ಮನೇ ಇರುವನೆಂದು ತಿಳಿದು ಬಾಹ್ಯವ್ಯವಹಾರದಲ್ಲಿ ಅಭಿಮಾನವಿಲ್ಲದಿರುವವರೇ ಸತ್ಪುರುಷರು. ಅಂತಪ್ಪ ಪರಮಾತ್ಮನಾದ ನನ್ನ ಲೀಲಾಕಥೆಗಳ ಪ್ರಸ್ತಾಪವು ಎರಡನೇ ಸಾಧನವು ನನ್ನ ಗುಣಬೋಧಕವಾದ ನಾಮಗಳನ್ನು ಹೇಳುವುದು ಮೂರನೇ ಸಾಧನವು, ನನ್ನ ವಿಷಯವಾದ ಮಾತುಗಳ ತಾತ್ಪರ್ಯವನ್ನು ಸರಿಯಾಗಿ ವಿವರಿಸುವುದು ನಾಲ್ಕನೇ ಸಾಧನವು ||೨೧||

ಎಲೌ ಸುಬುದ್ಧಿಯೇ, ಶಾಸ್ತ್ರಗಳಲ್ಲಿರುವ ಸದಾಚಾರಗಳನ್ನು ಸಂಗ್ರಹಿಸಿ ಹೇಳುತ್ತ ತಾನೂ ಆ ರೀತಿಯಿಂದಲೇ ನಡೆವವನು ಆಚಾರ್ಯನೆನಿಸುವನು. ನಾನೇ ಆತ್ಮನೆಂಬ ಬುದ್ಧಿಯಿಂದ ಕಪಟವಿಲ್ಲದೆ ಸರ್ವದಾ ಸೇವಿಸುವುದು ಐದನೇ ಸಾಧನವು ಮತ್ತು ಮನಸ್ಸಿನಲ್ಲಿಯೂ ಕೂಡ ಹಿಂಸೆ, ಸುಳ್ಳು, ಕಳ್ಳತನ, ಹಾದರ, ದುಷ್ಟದಾನಗ್ರಹಣ ಎಂಬ ಐದು ಪಶುಗಳು, ಶುಚಿತ್ವ ಯಥಾಲಾಭ ಸಂತೋಷ ತತ್ವವಿಚಾರ ವೇದಾಧ್ಯಯನ ಪರಮಾತ್ಮ ಧ್ಯಾನಗಳೆಂಬ ಐದು ನಿಯಮಗಳು, ಪಾಪಸಂಬಂಧವಿಲ್ಲದ ಆಚಾರವೂ ಕೂಡ ಐದನೇ ಸಾಧನವು ||೨೨||

ಸರ್ವಕಾಲದಲ್ಲೂ ನನ್ನ ಪೂಜೆಯಲ್ಲಿರುವುದು ಆರನೇ ಸಾಧನವು, ಸಾಂಗವಾಗಿ ನನ್ನ ಮಂತ್ರದ ಉಪಾಸನೆಯನ್ನು ಮಾಡುವುದು ಏಳನೇ ಸಾಧನವು ||೨೩||

ಮದ್ಭಕ್ತೇ ಷ್ವಧಿಕಾ ಪೂಜಾ ಸರ್ವಭೂತೇಷು ಮನ್ಮತಿಃ |
ಬಾಹ್ಯಾರ್ಥೇಷು ವಿರಾಗಿತ್ವಂ ಶಮಾದಿಸಹಿತಂ ತಥಾ ||೨೪||

ಅಷ್ಟಮಂ ನವಮಂ ತತ್ವವಿಚಾರೋ ಮಮ ಭಾಮಿನಿ |
ಏವಂ ನವವಿಧಾ ಭಕ್ತಿ ಸ್ಸಾಧನಂ ಯಸ್ಯ ಕಸ್ಯವಾ ||೨೫||

ಸ್ತ್ರೀಯೋ ವಾ ಪುರುಷಸ್ಯಾಪಿ ತಿರ್ಯಗ್ಯೋನಿಗತಸ್ಯ ವಾ |
ಭಕ್ತಿ ಸ್ಸಂಜಾಯತೆ ಪ್ರೇಮ ಲಕ್ಷ್ಮಣಾಶುಭಲಕ್ಷಣೆ ||೨೬||

ಭಕ್ತೌ ಸಂಜಾತಮಾತ್ರಾಯಾಂ ಮತ್ತತ್ವಾನುಭವ ಸ್ತದಾ |
ಮಮಾನುಭವಸಿದ್ಧಸ್ಯ ಮುಕ್ತಿ ಸ್ತತ್ರೈವ ಜನ್ಮನಿ |
ಸ್ಯಾತ್ತ ಸ್ಮಾ ತ್ಕಾರಣಂ ಭಕ್ತಿ ರ್ಮೋಕ್ಷಸ್ಯೇತಿ ಸುನಿಶ್ಚಿತಂ ||೨೭||

ನನ್ನ ಭಕ್ತರಲ್ಲಿ ಅಧಿಕವಾದ ಪೂಜೆಯು, ಸರ್ವಪ್ರಾಣಿಗಳಲ್ಲೂ ನಾನೆಂಬ ಬುದ್ಧಿಯು, ಆದರಿಂದ ಇತರ ಪದಾರ್ಥಗಳಲ್ಲಿ ಭೋಗಾಪೇಕ್ಷೆ ಇಲ್ಲದಿರುವುದು, ಆದಕ್ಕಾಗಿ ಅಂತಃಕರಣ ಬಾಹ್ಯಕರಣನಿಗ್ರಹವು, ಆಶೆಯಿಲ್ಲದಿರುವುದು, ಶೀತೋಷ್ಣಾದಿ ಸಹನವು ಗುರುವಾಕ್ಯಾದಿ ವಿಶ್ವಾಸವು, ಧ್ಯಾನದಲ್ಲೇಕಾಗ್ರತೆಯು ಸಹ ಎಂಟನೇ ಸಾಧನವು ||೨೪||

ಎಲೌ ಬುದ್ಧಿಸಂಪತ್ತುಗಳುಳ್ಳವಳೇ, ನಾನೆಂಬ ಪದಕ್ಕೆ ಅರ್ಥವಾದ ನನ್ನ ತತ್ವಾರ್ಥವನ್ನು ವಿಚಾರಿಸುವುದು ಒಂಭತ್ತನೇ ಸಾಧನವು. ಹೀಗೆ ನನ್ನ ಭಕ್ತಿಯು ಒಂಭತ್ತುಬಗೆಯಾಗಿರುವುದು. ಈ ಸಾಧನಗಳಲ್ಲಿ ಯಾವುದನ್ನು ಹಿಡಿದರೂ ಭಕ್ತಿಗೆ ಕಾರಣವಾಗುವುದು ||೨೫||

ಎಲೌ ಶುಭಲಕ್ಷಣೆಯೇ! ಸ್ತ್ರೀಗಾಗಲೀ ಅದರಲ್ಲಿ ತಿರ್ಯಗ್ಜಾತಿಯಾದ ಪ್ರಾಣಿಗಾಗಲೀ ಭಿನ್ನವಾಗಿ ಕಾಣಬರುವ ನನ್ನಲ್ಲಿ ತತ್ವವಿಚಾರದಿಂದ ಭೇದಬುದ್ಧಿಯು ಅಳಿವುದರಿಂದ ಆತ್ಮನಂತೆ ನಿರತಿಶಯ ಪ್ರೇಮರೂಪವಾದ ಭಕ್ತಿಯು ಉದಿಸುವುದು ||೨೬||

ಭಕ್ತಿಯು ಚನ್ನಾಗಿ ಹುಟ್ಟಿದೊಡನೆಯೇ ನನ್ನ ಸ್ಥಿತಿಯು ಆನಂದಾದ್ಯನುಭವವಾಗುವುದು. ನನ್ನನುಭವವು ಸಿದ್ಧವಾಗುವಲ್ಲಿ ಅದೇ ಜನ್ಮದಲ್ಲಿ ಮುಕ್ತಿಯಾಗುವುದರಿಂದ ಮೋಕ್ಷಕ್ಕೆ ಕಾರಣವಾದದ್ದು ಭಕ್ತಿಯೆಂತಲೇ ನಿಶ್ಚಯಿಸಲ್ಪಟ್ಟಿರುವುದು ||೨೭||

ಪ್ರಥಮಂ ಸಾಧನಂ ಯಸ್ಯ ಭವೇತ್ತಸ್ಯ ಕ್ರಮೇಣ ತು |
ಭವೇ ತ್ಸರ್ವಂ ತತೋ ಭಕ್ತಿ ರ್ಮುಕ್ತಿ ರೇವ ಸುನಿಶ್ಚಿತಂ ||೨೮||

ಯಸ್ಮಾ ನ್ಮದ್ಭಕ್ತಿಯುಕ್ತಾ ತ್ವಂ ತತೋ ಹಂ ತ್ವಾ ಮುಪಸ್ಥಿತಃ |
ಇತಿ ಮದ್ದರ್ಶನಾ ನ್ಮುಕ್ತಿ ಸ್ತವ ನಾಸ್ತ್ಯತ್ರ ಸಂಶಯಃ ||೨೯||

ಯದಿ ಜಾನಾಸಿ ಮೇ ಬ್ರೂಹಿ ಸೀತಾ ಕಮಲಲೋಚನಾ |
ಕುತ್ರಾಸ್ತೇ ಕೇನ ವಾ ನೀತಾ ಪ್ರಿಯಾ ಮೆ ಪ್ರಿಯದರ್ಶನಾ ||೨೧||

ಶಬರೀ ||

ದೇವ ಜಾನಾಸಿ ಸರ್ವಜ್ಞ ಸರ್ವಂ ತ್ವಂ ವಿಶ್ವಭಾವನ |
ತಥಾಪಿ ಪೃಚ್ಛಸೆ ಯನ್ಮಾಂ ಲೋಕಾನನುಸೃತಃ ಪ್ರಭೋ ||೩೧||

ತತೋಹ ಮಭಿಧಾಸ್ಯಾಮಿ ಸೀತಾ ಯತ್ರಾಧು ನಾಸ್ಥಿತಾ |
ರಾವಣೇನ ಹೃತಾ ಸೀತಾ ಲಂಕಾಯಾಂ ವರ್ತತೇ ಧುನಾ ||೩೨||

---

ಈ ಸಾಧನಗಳಲ್ಲಿ ಸತ್ಸಂಗರೂಪವಾದ ಮೊದಲನೆಯ ಸಾಧನವು ಯಾವನಿಗೆ ಆಗುವುದೋ ಅವನಿಗೆ ಕ್ರಮವಾಗಿ ಸರ್ವವೂ ಆಗುವುದರಿಂದ ನನ್ನ ಭಕ್ತಿಯೇ ಮುಕ್ತಿಯೆಂದು ನಿಶ್ಚಿತವಾಗಿರುವುದು ||೨೮||

ಯಾವ ಕಾರಣದಿಂದ ನೀನು ನನ್ನಲ್ಲಿ ಭಕ್ತಿಯುಕ್ತಳೋ ಅದರಿಂದ ನಾನು ನಿನ್ನ ಸಮೀಪಕ್ಕೆ ಬಂದೆನು. ಈರೀತಿಯಾಗಿ ನನ್ನ ದರುಶನದಿಂದ ನಿನಗೆ ಮುಕ್ತಿಯು ಸಿದ್ಧವಾಗಿರುವುದು. ಇದರಲ್ಲಿ ಸಂಶಯವಿಲ್ಲ ||೨೯||

ಈ ಮಾತು ಹಾಗಿರಲಿ, ಕಮಲದಳಾಕ್ಷಿಯಾದ, ಪ್ರಿಯವಾದ ನೋಟವುಳ್ಳ ನನಗೆ ಪ್ರಿಯಳಾದ ಸೀತೆಯು ಯಾವನಿಂದ ಕೊಂಡುಹೋಗಲ್ಪಟ್ಟಳು ? ಎಲ್ಲಿರು ವಳು ? ತಿಳಿದಿರುವೆಯಾದರೆ ನನಗೆ ಹೇಳು ? ||೩೦||

ಎಂದು ಶ್ರೀರಾಮನು ಕೇಳಲು, ಶಬರಿಯು — ಪ್ರಪಂಚವನ್ನುಂಟುಮಾಡಿ ಸರ್ವವನ್ನೂ ತಿಳಿದಿರುವ ಪ್ರಭುವಾದ ದೇವನೇ ! ನೀನು ಎಲ್ಲವನ್ನೂ ತಿಳಿದಿರುವೆ ! ಆದರೂ ಲೋಕಗಳನ್ನು ಅನುಸರಿಸುತ್ತ ನನ್ನನ್ನು ಕೇಳುತ್ತೀಯೆ ||೩೧||

ಆದ್ದರಿಂದ ನಾನು ಸೀತೆಯು ಈಗ ಎಲ್ಲಿರುವಳೋ ಅದನ್ನು ಹೇಳುವೆನು. ಆ ಸೀತೆಯು ರಾವಣನಿಂದ ಅಪಹರಿಸಲ್ಪಟ್ಟು ಈಗ ಲಂಕಾನಗರಿಯಲ್ಲಿರು ವಳು ||೩೨||

ಇತ ಸ್ಸಮೀಪೇ ರಾಮಾಸ್ತೆ ಪಂಪಾ ನಾಮ ಸರೋವರಂ |
ಋಷ್ಯಮೂಕ ಗಿರಿ ರ್ನಾಮ ತತ್ಸಮೀಪೇ ಮಹಾನಗಃ ||೩೩||

ಚತುರ್ಭಿ ರ್ಮಂತ್ರಿಭಿ ಸ್ಸಾರ್ಧಂ ಸುಗ್ರೀವೋ ವಾನರಾಧಿಪಃ |
ಭೀತಭೀತ ಸ್ಸದಾ ತತ್ರ ತಿಷ್ಠ ತ್ಯತುಲವಿಕ್ರಮಃ ||೩೪||

ವಾಲಿನ ಶ್ಶ ಭಯಾ ದ್ಭ್ರಾತು ಸ್ತದಗಮ್ಯ ಮೃಷೇ ರ್ಭಯಾತ್ |
ವಾಲಿನ ಸ್ತತ್ರ ಗಚ್ಛ ತ್ವಂ ತೇನ ಸಖ್ಯಂ ಕುರುಪ್ರಭೋ ||೩೫||

ಸುಗ್ರೀವೇಣ ಸಸರ್ವಂ ತೇ ಕಾರ್ಯಂ ಸಂಪಾದಯಿಷ್ಯತಿ |
ಅಹಮಗ್ನಿಂ ಪ್ರವೇಕ್ಷ್ಯಾಮಿ ತವಾಗ್ರೇ ರಘುನಂದನ ||೩೬||

ಮುಹೂರ್ತಂ ತಿಷ್ಠ ರಾಜೇಂದ್ರ ಯಾವದ್ದಗ್ಧ್ವಾ ಕಳೇಬರಂ |
ಯಾಸ್ಯಾಮಿ ಭಗವನ್ರಾಮ ತವ ವಿಷ್ಣೋಃ ಪರಂ ಪದಂ ||೩೭||

ಇತಿ ರಾಮಂ ಸಮಾಮಂತ್ರ್ಯ ಪ್ರವಿವೇಶ ಹುತಾಶನಂ |
ಕ್ಷಣಾನ್ನಿರ್ಧೂಯ ಸಕಲ ಮವಿದ್ಯಾಕೃತಬಂಧನಂ |
ರಾಮಪ್ರಸಾದಾಚ್ಛಬರೀ ಮೋಕ್ಷಂ ಪ್ರಾಪಾತಿದುರ್ಲಭಂ ||೩೮||

---

ಎಲೈ ಶ್ರೀರಾಮನೇ! ಇತ್ತಕಡೆ ಹತ್ತಿರದಲ್ಲಿ ಪಂಪೆಯೆಂಬ ಸರೋವರವಿರುವುದು, ಅದರ ಸಮೀಪದಲ್ಲಿ ಋಷ್ಯಮೂಕಗಿರಿಯೆಂಬ ದೊಡ್ಡದಾದ ಬೆಟ್ಟವಿದೆ ||

ಅಲ್ಲಿ ಅಸಮಾನ ಪರಾಕ್ರಮಿಯಾದ ವಾನರಾಧಿಪತಿಯಾದ ಸುಗ್ರೀವನು ಅತ್ಯಂತ ಭಯಪಟ್ಟವನಾಗಿ ನಾಲ್ಕು ಜನ ಮಂತ್ರಿಗಳೊಡನೆ ಸರ್ವದಾ ಇರುವನು ||

ಅಣ್ಣನಾದ ವಾಲಿಯಭಯದಿಂದ ಅಲ್ಲಿರುವನು. ಋಷಿಯ ಭಯದಿಂದ ಆ ಬೆಟ್ಟವು ವಾಲಿಗೆ ಹೊಂದಲು ಅಶಕ್ಯವಾಗಿರುವುದು. ಎಲೈ ಪ್ರಭುವೇ, ನೀನು ಆ ಬೆಟ್ಟಕ್ಕೆ ಹೋಗು. ಆ ಸುಗ್ರೀವನ ಸ್ನೇಹವನ್ನು ಮಾಡು ||೩೫||

ಅವನು ನಿನ್ನ ಕಾರ್ಯವೆಲ್ಲವನ್ನೂ ಸಾಧಿಸಿಕೊಡುವನು. ಎಲೈ ರಘುನಂದನನೇ? ನಿನ್ನೆದುರಿಗೆ ನಾನು ಅಗ್ನಿಪ್ರವೇಶಮಾಡುವೆನು ||೩೬||

ಎಲೈ ರಾಜೇಂದ್ರನಾದ ಭಗವಂತನಾದ ಶ್ರೀರಾಮನೇ! ಆವವರಿಗೆ ನಾನು ದೇಹವನ್ನು ದಹಿಸಿ ವಿಷ್ಣುವಾದ ನಿನ್ನ ಉತ್ತಮಸ್ಥಾನವನ್ನು ಹೊಂದುವೆನೋ ಅದು ಪರ್ಯಂತರ ಇಲ್ಲಿಯೇ ನಿಲ್ಲುವವನಾಗು ||೩೭||

ಎಂದು ರಾಮನನ್ನು ಕೇಳಿಕೊಂಡು ಅಗ್ನಿಯನ್ನು ಪ್ರವೇಶಿಸಿದಳು, ರಾಮನ

ಕಿಂ ದುರ್ಲಭಂ ಜಗನ್ನಾಥೆ ಶ್ರೀರಾಮೆ ಭಕ್ತವತ್ಸಲೆ |
ಪ್ರಸನ್ನೆ ಧನುಜಾನ್ಮಾಪಿ ಶಬರೀ ಮುಕ್ತಿ ಮಾಪ ಸಾ ||೩೯||
ಕಿಂ ಪುನ ಬ್ರಾಹ್ಮಣಾ ಮುಖ್ಯಾಃ ಪುಣ್ಯಾ ಶ್ರೀರಾಮಚಿಂತಕಾಃ |
ಮುಕ್ತಿಂ ಯಾಂತೀತಿ ತದ್ಭಕ್ತಿ ರ್ಮುಕ್ತಿ ರೇವ ನ ಸಂಶಯಃ ||೪೦||
ಭಕ್ತಿ ರ್ಮುಕ್ತಿವಿಧಾಯಿನೀ ಭಗವತ ಶ್ರೀರಾಮಚಂದ್ರಸ್ಯ ಹೆ ಲೋಕಾಃ |
ಕಾಮದುಘಾಂಘ್ರಿ ಪದ್ಮಯುಗಳಂ ಸೇವಧ್ವ ಮತ್ಯುತ್ಸುಕಾಃ ||
ನಾನಾಜ್ಞಾನವಿಶೇಷಮಂತ್ರ ವಿತತಿಂ ತ್ಯಕ್ತ್ವಾಸುದೂರೇ ಭೃಶಂ |
ರಾಮಂ ಶ್ಯಾಮತನುಂ ಸ್ಮರಾರಿ ಹೃದಯೆ ಭಾಂತಂ ಭಜಧ್ವಂ ಬುಧಾಃ ||

|| ದಶಮಸ್ಸರ್ಗ ಸಮಾಪ್ತಃ ||

---

ಅನುಗ್ರಹದಿಂದ ಆ ಶಬರಿಯು ಕ್ಷಣಮಾತ್ರದಲ್ಲಿ ಅವಿದ್ಯೆಯಿಂದುಂಟಾಗಿದ್ದ ಬಂಧನವೆಲ್ಲವನ್ನೂ ಕೊಡಹಿ ಅತ್ಯಂತವಾಗಿ ದುರ್ಲಭವಾದ ಮೋಕ್ಷವನ್ನು ಪಡೆದಳು ||

ಇವಳಿಗೆ ವಿಮಾನವು ಬರಲಿಲ್ಲವಾದುದರಿಂದ ಇವಳು ಕೈವಲ್ಯವನ್ನು ಪಡೆದಳೆಂದು ತಿಳಿಯುವುದು. ಜಗತ್ತುಗಳಿಂದ ಪ್ರಾರ್ಥಿಸಲ್ಪಡುವ ಭಕ್ತವತ್ಸಲನಾದ ಶ್ರೀರಾಮನು ಪ್ರಸನ್ನನಾಗುವಲ್ಲಿ ಯಾವುದು ದುರ್ಲಭವು. ನೀಚವಾದ ಕಿರಾತ ಜಾತಿಯಲ್ಲಿ ಹುಟ್ಟಿದ ಆ ಶಬರಿಯೂ ಕೂಡ ಮುಕ್ತಿಯನ್ನು ಪಡೆದಳು ||೩೯||

ಬ್ರಾಹ್ಮಣಜಾತಿಯವರಾಗಿ ಸದಾಚಾರರಾಗಿರುವ ರಾಮಧ್ಯಾನಿಗಳು ಮುಕ್ತಿಯನ್ನು ಪಡೆವರೆನ್ನುವಲ್ಲಿ ಹೇಳತಕ್ಕದ್ದೇನು. ಇದರಿಂದ ಅವನ ಭಕ್ತಿಯೇ ಮುಕ್ತಿಯೆನ್ನುವುದರಲ್ಲಿ ಸಂಶಯವಿಲ್ಲ ||೪೦||

ಭಗವಂತನಾದ ಶ್ರೀರಾಮಚಂದ್ರನ ಭಕ್ತಿಯು ಮುಕ್ತಿಯನ್ನು ಕೊಡತಕ್ಕುದು. ಎಲೈ ಜನಗಳಿರಾ! ಕಾಮಧೇನುವಾದ ಪಾದಕಮಲದ್ವಯವುಳ್ಳ ಶ್ರೀರಾಮನನ್ನೇ ಅತಿ ಕುತೋಹಲದಿಂದ ಸೇವಿಸಿರಿ. ಎಲೈ ಪ್ರಜೆಗಳಿರಾ? ನಾನಾಪ್ರಕಾರವಾದ ಅರ್ಥಜ್ಞಾನವುಳ್ಳ ಮಂತ್ರಗಳ ಸಮೂಹಗಳನ್ನು ದೂರದಲ್ಲಿ ಬಿಟ್ಟು ಇಂದ್ರನೀಲಮಣಿಯಂತೆ ಕಪ್ಪಾದ ದೇಹವುಳ್ಳವನಾಗಿ, ಕಾಮಶತ್ರುವಾದ ಪರಮೇಶ್ವರನ ಹೃದಯದಲ್ಲಿಯೂ ಪ್ರಕಾಶಿಸುವ ಶ್ರೀರಾಮನನ್ನೇ ಭಜಿಸಿರಿ ||೪೧||

|| ಹತ್ತನೇ ಸರ್ಗವು ಮುಗಿದುದು ||

ಇಲ್ಲಿಗೆ ಅರಣ್ಯಕಾಂಡವು ಸಂಪೂರ್ಣ